ವಾಹನಕ್ಕೆ ನಕಲಿ ನೋಂದಣಿ ಸಂಖ್ಯೆ:ಕೆಎಲ್–14–ಇ–9639 ಇದನ್ನು ಬಳಸಿದ್ದು, ಸದರಿ ನಂಬರು ದ್ವಿಚಕ್ರ ವಾಹನದ ನೋಂದಣಿ ಸಂಖ್ಯೆ ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾಂಜ್ಞಾಗಾಡ್, ಕೇರಳ ಇವರು ನೀಡಿರುವ ದಿನಾಂಕ:01.08.2007ರ ಬಿ ಎಕ್ಸ್‌ಟ್ರಾಕ್ಟ್ ವರದಿಯಿಂದ ದೃಢಪಟ್ಟಿರುವ ಕಾರಣ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರನ್ನು ಈಗಾಗಲೇ ಮೂರು ವರ್ಷ ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆಗಾಗಿ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಅಕ್ರಮ ಸಾರಾಯಿ ಸ್ಯಾಚೆಟ್‌ಗಳ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ 800 ಕಾರು ನಕಲಿ ಸಂಖ್ಯೆ: ಕೆಎಲ್–14–ಇ–9639 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/605/ಡಿಟಿಸಿಆರ್/2005–06, ದಿನಾಂಕ:31ನೇ ಅಕ್ಟೋಬರ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು, ವಿಟ್ಲ ಪೊಲೀಸ್ ಠಾಣೆ, ವಿಟ್ಲ ಇವರ ತಕ್ಷೀರು ಸಂಖ್ಯೆ:43/2006 ದಿನಾಂಕ:23.04.2006ರಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ನಕಲಿ ಸಂ:ಕೆಎಲ್–14–ಇ–9639 ನ್ನು (ಚಾಸೀಸ್ ನಂಬರು 16233781 ಮತ್ತು ಇಂಜಿನ್ ನಂಬರು 1082924) ನಿಯಮ 43(ಸಿ) ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:31.10.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಪಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1: ಶ್ರೀ ರತ್ನಾಕರ ರೈ. ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಬಂಟ್ವಾಳ ವಲಯ.

ಪ್ರಾ.ಸಾ.–2: ಶ್ರೀ ಸಿ.ಪಿ. ಬಾಲಚಂದ್ರ ಗೌಡ, ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಪೂರ್ವ ಪೊಲೀಸ್ ಠಾಣೆ, ಕದ್ರಿ.

**ಅನುಬಂಧ–2**

**ಪಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1: ರಾಸಾಯನಿಕ ವಿಶ್ಲೇಷಕರ ವರದಿ.

ನಿಶಾನೆ ಪಿ–2 : ಈ ಪ್ರಾಧಿಕಾರಕ್ಕೆ ದಿನಾಂಕ:30.09.2006 ರಂದು ಸಲ್ಲಿಸಿದ ವರದಿ.

ನಿಶಾನೆ ಪಿ–2ಎ: ವರದಿಯಲ್ಲಿರುವ ಸಹಿ.

ನಿಶಾನೆ ಪಿ–3 : ಈ ಪ್ರಾಧಿಕಾರಕ್ಕೆ ದಿನಾಂಕ:07.08.2007ರಂದು ಸಲ್ಲಿಸಿದ ವರದಿ.

ನಿಶಾನೆ ಪಿ–3ಎ: ವರದಿಯಲ್ಲಿರುವ ಸಹಿ

ನಿಶಾನೆ ಪಿ–4: ಮಹಜರು –1 ರ ಪ್ರತಿ.

ನಿಶಾನೆ ಪಿ–5: ಮಹಜರು–2ರ ಪ್ರತಿ.

ನಿಶಾನೆ ಪಿ–6: ಮಾದರಿ ಸೀಲ್ ಪ್ರತಿ.

ನಿಶಾನೆ ಪಿ–7: ಪ್ರಥಮ ಮಾಹಿತಿ ವರದಿಯ ಪ್ರತಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು: –ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1182

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಇಡಿ 104 ಡಿಪಿಐ 2008, ಬೆಂಗಳೂರು, ದಿನಾಂಕ:7ನೇ ನವೆಂಬರ್, 2009**

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್-ಬಿ ವೃಂದದ ಅಧಿಕಾರಿಗಳ ದಿನಾಂಕ:27.09.2006ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 99ಕ್ಕೆ ತಿದ್ದುಪಡಿ ಕುರಿತು.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 99 ದಿನಾಂಕ:27.09.2006.

ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ 'ಬಿ' ವೃಂದದ ಅಧಿಕಾರಿಗಳಾದ (ಬೋಧಕ) ಶ್ರೀ ರಾಮಣ್ಣವರ, ನಿವೃತ್ತ ಮುಖ್ಯ ಶಿಕ್ಷಕರು, ಕೋಳಿವಾಡ, ಹುಬ್ಬಳ್ಳಿ ತಾಲ್ಲೂಕು ಇವರು ಮಾನ್ಯ ಕೆ.ಎ.ಟಿ. ನ್ಯಾಯಾಲಯದಲ್ಲಿ ಅರ್ಜಿ ಸಂಖ್ಯೆ: 413/03ನ್ನು ಸಲ್ಲಿಸಿದ್ದು, ದಿನಾಂಕ:24.04.2008ರಂದು ಅರ್ಜಿಯು ಇತ್ಯರ್ಥವಾಗಿರುತ್ತದೆ. ಶ್ರೀ ಪಿ.ಜಿ. ರಾಮಣ್ಣವರ ಇವರ ಜೇಷ್ಠತಾ ಸಂಖ್ಯೆಯು 1748 ಆಗಿದ್ದು, ಇವರು ದಿನಾಂಕ:30.11.1992 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀಮತಿ ಕೆ. ವಿಜಯಲಕ್ಷ್ಮಿ, ಗ್ರೇಡ್-1 ಇವರ ಜೇಷ್ಠತಾ ಸಂಖ್ಯೆ:1758 ಆಗಿದ್ದು, ಇವರಿಗೆ ದಿನಾಂಕ:29.10.1996 ರಂದು ಸ್ಥಾನಪನ್ನ ಬಡ್ತಿಯನ್ನು ನೀಡಲಾಗಿದೆ. ದಿನಾಂಕ:29.10.1996 ರಂದು ಶ್ರೀ ಪಿ.ಜಿ. ರಾಮಣ್ಣವರ ಇವರು ಸೇವೆಯಿಂದ ನಿವೃತ್ತಿ ಹೊಂದಿದ್ದರಿಂದ ಇವರಿಗೆ ಸ್ಥಾನಪನ್ನ ಬಡ್ತಿ ನೀಡಿರುವುದಿಲ್ಲ.

ದಿನಾಂಕ:11.10.1984 ರಿಂದ 13.01.1994ರ ವರೆಗಿನ ಅವಧಿಯಲ್ಲಿ ಬಡ್ತಿಗಾಗಿ ಉದ್ಭವವಾಗಿದ್ದ 662 ಹುದ್ದೆಗಳಲ್ಲಿ 542 ಹುದ್ದೆಗಳನ್ನು ಮಾತ್ರ ಬಡ್ತಿಗಾಗಿ ಉಪಯೋಗಿಸಿಕೊಂಡಿದ್ದರಿಂದ, ಉಳಿದ 120 ರಿಕ್ತಸ್ಥಾನಗಳಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 32 ರನ್ವಯ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಬಡ್ತಿಯನ್ನು ಪಡೆದಿರುವ 120 ಮುಖ್ಯ ಶಿಕ್ಷಕರುಗಳಿಗೆ ದಿನಾಂಕ:27.09.2006 ರಲ್ಲಿ ಅರ್ಹತಾ ದಿನಾಂಕವನ್ನು ಪರಿಷ್ಕರಿಸಿ ಆದೇಶಿಸಲಾಗಿದೆ. ಈ ಅಧಿಸೂಚನೆಯಲ್ಲಿ ಶ್ರೀ ಪಿ.ಜಿ. ರಾಮಣ್ಣವರ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿದ್ದು, ದಿನಾಂಕ:29.10.1996 ರಂದು ಸ್ಥಾನಪನ್ನ ಬಡ್ತಿಯನ್ನು ಪಡೆದಿರುವ ಶ್ರೀಮತಿ ಕೆ.ವಿಜಯಲಕ್ಷ್ಮಿ, ಗ್ರೇಡ್-1 ಜೇಷ್ಠತಾ ಸಂಖ್ಯೆ: 1758, (ಎಸ್.ಸಿ.) ಇವರಿಗೆ ದಿನಾಂಕ:31.03.1988 ರಿಂದ ಅರ್ಹತಾ ದಿನಾಂಕ ನಿಗದಿಪಡಿಸಲಾಗಿದೆ. ಆದುದರಿಂದ ಶ್ರೀ ಪಿ.ಜಿ. ರಾಮಣ್ಣವರ ಇವರು ದಿನಾಂಕ:31.03.1988 ರಂದು ಸೇವೆಯಲ್ಲಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮ 32 ರಡಿ ಕಾರ್ಯ ನಿರ್ವಹಿಸುತ್ತಿದ್ದರಿಂದ ಇವರಿಗೂ ಸಹ ದಿನಾಂಕ:31.03.1988 ರಿಂದ ಅರ್ಹತಾ ದಿನಾಂಕವನ್ನು ನಿಗದಿಪಡಿಸಲು, ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 1999 ದಿನಾಂಕ:27.09.2006ರ ಅನುಬಂಧದಲ್ಲಿನ ಕ್ರಮಸಂಖ್ಯೆ 583 ಮತ್ತು 584ರ ನಡುವೆ 583ಎ ಎಂದು ತಿದ್ದುಪಡಿ ಮಾಡಲು ಉದ್ದೇಶಿಸಿ, ಕರಡು ತಿದ್ದುಪಡಿಯನ್ನು ದಿನಾಂಕ:20.08.2009ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಈ ತಿದ್ದುಪಡಿ ಜೇಷ್ಠತಾ ಪಟ್ಟಿಯಿಂದ ಬಾದಿತರಾಗುವ ಅಧಿಕಾರಿಗಳಿಂದ ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಈ ತಿದ್ದುಪಡಿ ಜೇಷ್ಠತಾ ಪಟ್ಟಿಗೆ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದುದರಿಂದ ಜೇಷ್ಠತಾ ಪಟ್ಟಿಯನ್ನು ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ಘಟಕ | ಎಸ್.ಎಸ್.ಎ. ಗ್ರೇಡ್‌ಶನ್ ಪಟ್ಟಿ ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|---|
| 583ಎ | – | 1748 | ಪಿ.ಜಿ. ರಾಮಣ್ಣವರ | 20.11.1934 | 10.07.1958 | 31.03.1988 |

ಸದರಿ ತಿದ್ದುಪಡಿ ಜೇಷ್ಠತಾ ಪಟ್ಟಿಯನ್ನು ಭಾರತದ ಸರ್ವೋಚ್ಚ ನ್ಯಾಯಾಲಯವು ಶ್ರೀ ಗೋನಾಳ್ ಭೀಮಪ್ಪ ಇವರ ಪ್ರಕರಣದಲ್ಲಿ ನೀಡಿದ ತೀರ್ಪಿನನ್ವಯ ಹಾಗೂ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 43 ಎಸ್‌ಎಸ್‌ಆರ್ 87, ದಿನಾಂಕ:14.12.1987ರಲ್ಲಿ ನೀಡಿದ ಮಾರ್ಗದರ್ಶನದಂತೆ ಪರಿಶೀಲಿಸಿ ಅಂತಿಮ ತಿದ್ದುಪಡಿ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಟಿ. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ)

ಪಿ.ಆರ್.1231

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಪ್ರಾಧಿಕಾರಿಯವರ ನ್ಯಾಯಾಲಯ, ಬೆಂಗಳೂರು ವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಪ್ರಕರಣ ಸಂಖ್ಯೆ: ಸಕಾಆಬೆಂ–3/ಪಿಜಿಎ/ಸಿಆರ್–102/06–07, ದಿನಾಂಕ:19ನೇ ನವೆಂಬರ್, 2009**

**ಉಪಸ್ಥಿತರು:** ಬಾಲಕೃಷ್ಣ ಸಿ.ಹೆಚ್.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆ 1972 ರಡಿ ನಿಯಂತ್ರಣಾಧಿಕಾರಿ, ಬೆಂಗಳೂರು ವಿಭಾಗ–3, ಬೆಂಗಳೂರು.

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) ಶ್ರೀಮತಿ ಪರ್ವೀನ್ ತಾಜ್ ಕೋಂ ಲೇಟ್ ಮೆಹಬೂಬ್ ಸಾಬ್, ವಯಸ್ಸು 38 ವರ್ಷ.<br>2) ಶ್ರೀಮತಿ ಮಮ ಜೀಜಾನು ಲೇಟ್ ಮೆಹಬೂಬ್ ಸಾಬ್ ರವರ ಮಗಳು, ವಯಸ್ಸು 13 ವರ್ಷ.<br>3) ಶ್ರೀ ದಾದಾಪೀರ್ ಬಿನ್ ಲೇಟ್ ಮೆಹಬೂಬ್ ಸಾಬ್, ವಯಸ್ಸು, 12 ವರ್ಷ,<br>ಕೇರಾಫ್ ಪಿ.ಎಂ. ಇಮಾಮ್ ಸಾಬ್, ನ್ಯೂ ವಾಟರ್ ಟ್ಯಾಂಕ್ ಹತ್ತಿರ, ಬಾಗೇಪಲ್ಲಿ, ಕೋಲಾರ ಜಿಲ್ಲೆ. | ವಿಭಾಗೀಯ ನಿಯಂತ್ರಣಾಧಿಕಾರಿ, ಕೆ.ಎಸ್.ಆರ್.ಟಿ.ಸಿ., ಕೋಲಾರ ವಿಭಾಗ, ಕೋಲಾರ. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:10.11.2006 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅವರ ಪತಿ ಲೇಟ್ ಮೆಹಬೂಬ್ ಸಾಬ್, ಇವರು ಪ್ರತಿವಾದಿ ಸಂಸ್ಥೆಯಲ್ಲಿ 16 ವರ್ಷಗಳ ಕಾಲ ಸೇವೆ ಸಲ್ಲಿಸಿ, ದಿನಾಂಕ:23.04.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯಾ ಬರಬೇಕಾದ ವ್ಯತ್ಯಾಸ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿದಾರರನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಬಾಲಕೃಷ್ಣ ಸಿ.ಹೆಚ್.**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ
ಉಪಧನ ಪಾವತಿ, ಕಾಯ್ದೆಯಡಿ ನಿಯಂತ್ರಣಾಧಿಕಾರಿಗಳು,
ಬೆಂಗಳೂರು, ವಿಭಾಗ–3, ಬೆಂಗಳೂರು.

ಪಿ.ಆರ್.1230

**ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಅರೇಹಳ್ಳಿ ಗ್ರಾಮದಲ್ಲಿ ಹಸಿರು ಗ್ರಾನೈಟ್‌ಗಾಗಿ ಶ್ರೀ ಕೆ.ಎಂ. ಮೋಹನ್‌ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:374ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ಹಾಗೂ ರದ್ದುಗೊಳಿಸುತ್ತಿರುವ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ್ದರಿಂದ, ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸಿರುವ ಬಗ್ಗೆ.

**ಉಲ್ಲೇಖ:** ಹಿರಿಯ ಭೂವಿಜ್ಞಾನಿ, ಹಾಸನರವರ ಪತ್ರ ಸಂಖ್ಯೆ: 2512/ ಗಭೂಇ/ ಡಿಸಿಬಿ/ ಕಗಗು/ 374/ 2007–08, ದಿನಾಂಕ:08.09.2009.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಅರೇಹಳ್ಳಿ ಗ್ರಾಮದ ಸರ್ವೆ ನಂ.45ರಲ್ಲಿ 1–10 ಎಕರೆ ವಿಸ್ತೀರ್ಣದಲ್ಲಿ ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:374ರ ಗುತ್ತಿಗೆಯನ್ನು ಶ್ರೀ ಕೆ.ಎಂ. ಮೋಹನ್ ರವರ ಹೆಸರಿನಲ್ಲಿ ದಿನಾಂಕ:08.09.2000 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. 2009ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.69,624/–ಗಳನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ಹಿರಿಯ ಭೂವಿಜ್ಞಾನಿ(ಖ), ಹಾಸನರವರು ಲೆಕ್ಕ ಪರಿಶೀಲನಾ ವರದಿಯಲ್ಲಿ ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ರ ನಿಯಮ 6(1)ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿಗುತ್ತಿಗೆ ಸಂಖ್ಯೆ:374ನ್ನು ನಿಯಮದಂತೆ ಲ್ಯಾಪ್ಸ್_ಲೀಸೆಂದು ಪರಿಗಣಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗು:374:2009–10/9948, ದಿನಾಂಕ:25ನೇ ನವೆಂಬರ್, 2009**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ–6(1) ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಅರೇಹಳ್ಳಿ ಗ್ರಾಮದ ಸರ್ವೆ ನಂ.45ರಲ್ಲಿ 1–10 ಎಕರೆಗೆ ಹಸಿರು ಗ್ರಾನೈಟ್‌ಗಾಗಿ ಶ್ರೀ ಕೆ.ಎಂ. ಮೋಹನ್‌ರವರ ಹೆಸರಿನಲ್ಲಿ ಮಂಜೂರು ಮಾಡಲಾದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 374ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್_ಲೀಸ್ ಎಂದು ಪರಿಗಣಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.1232 ನಿರ್ದೇಶಕರು.

**IN THE COURT OF COMMISSIONER FOR WORKMEN'S COMPENSATION BIDAR**

**No.LOB/WCA/Cr-F47/2009, Dated:19th November, 2009**

| Applicants: | | Respondents: |
|---|---|---|
| 1) Sangeeta W/o Late Devindra @ Devidass, Age:31 yrs, Occu: Household, R/o Sastapur Tq: Basawakalyan, Dist: Bidar New Resident at Behind Karnataka College Bidar and 3 others. | V/s | 1) Vanraj S/o Veershetappa Patil, Age:Major Occu: Business, R/o Sastapur Tq: Baswakalyan Dist: Bidar.<br>2) The Manager, of Choloman dalam M/s G.I.C. Ltd., Dane House 2nd Floor NSC Bose Road, Chennai-600001. |

**PROCLAIMATION**

Sri/Smt Sangeeta W/o. F/o. S/o Late Devindra & Devidas R/o. Village: Sastapur Tq: Basavakalyan Now at Bidar. have/ has filed application in this Court claiming compensation stating that Late Devindra @ Devidass was working as Driver. Under the Respondent No. I he met with an accident arising out of and during the course of employment as a result he died on 21.09.2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

Commissioner for workmen's
Compensation, Bidar.

PR-1233

**IN THE COURT OF COMMISSIONER FOR WORKMEN'S COMPENSATION BIDAR**

**No.LOB/WCA/Cr-F49/2009,**

| Applicants: | | Respondents: |
|---|---|---|
| 1) Bakappa S/o Chandrappa, Age:45 yrs Occu:Agl, R/o Sindol Tq: Bhalki, Dist: Bidar & 1 Other. | V/s | 1) G. Venkatesham S/o Late G. Sangayya age Major occu: Businessmen R/o Karch at Raikod, Mandal Dist. Medak (A.P.)<br>2) Reliance General Insurance Co., Ltd., 570 Rectifier Road, House Naigam Cross Road, Wadala (W) Mumbai. |

**PROCLAIMATION**

Sri/Smt Bakappa W/o. F/o. S/o Satish Kumar R/o. Village: Sindol have/ has filed application in this Court claiming compensation stating that Late Satish Kumar was working as Cleaner Under the

Respondent No he met with an accident arising out of and during the course of employment as a result he died on 17.01.2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

Commissioner for workmen's
Compensation, Bidar.

PR-1234

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಆಯುಕ್ತರು, ಉಪವಿಭಾಗ–1, ಕಾರ್ಮಿಕ ಭವನ, ಐ.ಟಿ.ಐ. ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಕಾಅಬೆಂ–1/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್–47/2009, ದಿನಾಂಕ:19ನೇ ನವೆಂಬರ್, 2009**

**ಅರ್ಜಿದಾರರು**

1) ಶ್ರೀ ಫರೂಕ್ ಪಾಷ ತಂದೆ ಲೇಟ್ ಜಬ್ಬಾರ್ ಖಾನ್, 50 ವರ್ಷ.
2) ಶ್ರೀಮತಿ ಸಬೀಹಾ ಬೇಗಂ ಕೋಂ ಫರೂಕ್ ಪಾಷ, 45 ವರ್ಷ, ಚೌಡೇಶ್ವರಿ ಲೇಔಟ್, ದಾಸರಹಳ್ಳಿ, ಬೆಂಗಳೂರು–57

**ಪ್ರತಿವಾದಿಗಳು**

1) ಶ್ರೀ ಅಬ್ದುಲ್ ವಾಜೀದ್ ತಂದೆ ಲೇಟ್ ಜಬ್ಬಾರ್ ಸಾಬ್, ನಂ.15, 2ನೇ ಮಹಡಿ, 8ನೇ ಕ್ರಾಸ್, 8ನೇ ಮೈನ್, ಎನ್.ಜಿ.ಪಾಳ್ಯ, ಧರ್ಮಾವರಂ ಕಾಲೇಜ್ ಅಂಚೆ, ಬೆಂಗಳೂರು–29.
2) ಬಜಾಜ್ ಅಲೈಯನ್ಸ್ ಜನರಲ್ ಇ.ಕಂ.ಲಿ., ನಂ.31, ಟಿಬಿಆರ್ ಟವರ್ಸ್, ಅಡ್ಜೇಸೆಂಟ್ ಟು ಬೆಂಗಳೂರು ಸ್ಟಾಕ್–ಎಕ್ಸ್‌ಚೇಂಜ್, ನ್ಯೂ ಮಿಷನ್ ರಸ್ತೆ, ಬೆಂಗಳೂರು–2.

**ಪ್ರಕಟಣೆ**

ಈ ಮೇಲೆ ನಮೂದಿಸಿದ ಅರ್ಜಿದಾರರು ತಾವು ಮೃತ ಸಾದಿಕ್ @ ಸಾದಿಕ್ ಪಾಷ ಇವರ ಅವಲಂಬಿತರೆಂದೂ ಮೃತನು ಒಂದನೇ ಪ್ರತಿವಾದಿಯವರ ವಾಹನದಲ್ಲಿ ಚಾಲಕ ಎಂದು ಕೆಲಸ ಮಾಡುವಾಗ, ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:27.03.2009ರಂದು ಮರಣ ಹೊಂದಿರುತ್ತಾರೆಂದೂ, ಈ ಸಂಬಂಧ ತಮಗೆ ಕಾಯ್ದೆ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯಪಡಿಸಿದೆ.

**ಎಂ. ನಾಗರಾಜು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ
ಅಧಿಕಾರಿ ಉಪವಿಭಾಗ–1, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಆಯುಕ್ತರು, ಉಪವಿಭಾಗ–1, ಕಾರ್ಮಿಕ ಭವನ, ಐ.ಟಿ.ಐ. ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಕಾಅಬೆಂ–1/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್–48/2009, ದಿನಾಂಕ:19ನೇ ನವೆಂಬರ್, 2009**

**ಅರ್ಜಿದಾರರು**

1) ಶ್ರೀ ವಣ್ಣೂರು ಸಾಬ್ @ ಹೊನ್ನೂರು ಸಾಬ್ ತಂದೆ ಹೊನ್ನೂರ್ ಸಾಬ್ 62 ವರ್ಷ.
2) ಶ್ರೀಮತಿ ಕುಳ್ಳೆಯಮ್ಮ ಕೋಂ ವಣ್ಣೂರು ಸಾಬ್ @ ಹೊನ್ನೂರು ಸಾಬ್, 58 ವರ್ಷ.
# 18, 12ನೇ ಮೈನ್, 1ನೇ ಬ್ಲಾಕ್ ರಾಜಾಜಿನಗರ, ಬೆಂಗಳೂರು–10.

**ಪ್ರತಿವಾದಿಗಳು**

1) ಶ್ರೀ ಎ.ಎನ್. ಕುಮಾರ್ ತಂದೆ ಆರ್.ಎ. ನಾರಾಯಣ್, ಮಾಲೀಕರು, ಮೆ:ಕುಮಾರ್ & ಕಂಪನಿ ಇಂಟರ್ ನ್ಯಾಷನಲ್ ಇನ್‌ಸ್ಟಿಟ್ಯೂಷನ್, ನಂ.171/1, 6ನೇ ಕ್ರಾಸ್, 8ನೇ ಮೈನ್, ಮಲ್ಲೇಶ್ವರಂ, ಬೆಂಗಳೂರು–3.

2) ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿ.ಒ. ಆಡುಗೋಡಿ, ನಂ.6, 7ನೇ ಮೈನ್, ಬಿಟಿಎಸ್ ಕಲ್ಯಾಣಮಂಟಪದ ಮುಂದೆ, 80 ರಸ್ತೆ, 3ನೇ ಬಿ.ಬ್ಲಾಕ್, ಕೋರಮಂಗಲ, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ನಮೂದಿಸಿದ ಅರ್ಜಿದಾರರು ತಾವು ಮೃತ ವಿ. ಮಾಬುಸಾಬ್ ಇವರ ಅವಲಂಬಿತರೆಂದೂ ಮೃತನು ಒಂದನೇ ಪ್ರತಿವಾದಿಯವರ ವಾಹನದಲ್ಲಿ ಚಾಲಕ ಎಂದು ಕೆಲಸ ಮಾಡುವಾಗ, ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:04.11.2009ರಂದು ಮರಣ ಹೊಂದಿರುತ್ತಾರೆಂದೂ, ಈ ಸಂಬಂಧ ತಮಗೆ ಕಾಯ್ದೆ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯಪಡಿಸಿದೆ.

**ಎಂ. ನಾಗರಾಜು**

ಪಿ.ಆರ್.1235

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ ಉಪವಿಭಾಗ–1, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪವಿಭಾಗ–2, ಮಂಡ್ಯ ಇವರ ನ್ಯಾಯಾಲಯ**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್–43/2005, ದಿನಾಂಕ:24ನೇ ನವೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಎಲ್. ಮಹಾಲಕ್ಷ್ಮಿ ಬಿನ್ ಲೇಟ್ ಲಿಂಗಯ್ಯ, ಮನೆ ನಂ.101, ಹರಳಹಳ್ಳಿ ಗ್ರಾಮ, ವಿಶ್ವೇಶ್ವರ ನಗರ ಅಂಚೆ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. | ಮುಖ್ಯ ಕಾರ್ಯ ನಿರ್ವಾಹಕರು, ಎನ್.ಸಿ.ಎಂ./ಎನ್.ಎಸ್.ಎಲ್. ಶುಗರ್ಸ್ ಲಿ., ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಸಹೋದರ ಎಲ್.ಮಹೇಶ್ ಕುಮಾರ್ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮದ್ ಯೂಸುಫ್**

ಪಿ.ಆರ್.1236

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಮಂಡ್ಯ ಉಪವಿಭಾಗ–2, ಮಂಡ್ಯ–571401.

## GOVERNMENT OF KARNATAKA
## DIRECTORATE OF ECONOMICS AND STATISTICS, BANGALORE-1
### Consumer Price Index Numbers For Industrial Workers

No. DES 08 PWX 2009 Month: September, 2009

State: Karnataka Base: 1987-88=100 Date :17-11-2009

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:**<br>(a) Cereals & Products | 581 | 671 | 646 | 543 | 477 | 550 | 575 | 638 | 485 | 617 | 666 |
| | (b) Pulses & Products | 663 | 656 | 704 | 759 | 724 | 661 | 594 | 713 | 644 | 737 | 668 |
| | (c) Oil & Fats | 298 | 279 | 288 | 294 | 294 | 280 | 299 | 291 | 258 | 279 | 262 |
| | (d) Meat, Fish & Eggs | 610 | 624 | 609 | 539 | 624 | 566 | 487 | 564 | 786 | 679 | 532 |
| | (e) Milk & Products | 395 | 361 | 409 | 390 | 412 | 425 | 371 | 423 | 356 | 432 | 360 |
| | (f) Condiments & Spices | 412 | 456 | 622 | 541 | 407 | 391 | 413 | 421 | 441 | 470 | 411 |
| | (g) Vegetables & Fruits | 525 | 464 | 583 | 605 | 468 | 487 | 518 | 447 | 427 | 442 | 519 |
| | (h) Other Food | 484 | 552 | 500 | 573 | 519 | 473 | 460 | 416 | 377 | 498 | 492 |
| | **FOOD GROUP INDEX** | **514** | **549** | **571** | **536** | **485** | **487** | **488** | **541** | **486** | **547** | **525** |
| II. | Pan, Supari, Tobacco & Intoxicants | 443 | 523 | 529 | 395 | 372 | 557 | 506 | 345 | 316 | 434 | 498 |
| III. | Fuel & Light | 337 | 383 | 424 | 526 | 463 | 386 | 377 | 408 | 336 | 627 | 319 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 275 | 274 | 248 | 395 | 334 | 257 | 428 | 494 | 243 | 579 | 233 |
| VI. | **MISCELLANEOUS:**<br>(a) Medical Care | 663 | 815 | 386 | 436 | 253 | 252 | 456 | 426 | 329 | 427 | 242 |
| | (b) Education, Recreation & Amusement | 419 | 455 | 805 | 260 | 454 | 469 | 369 | 354 | 657 | 508 | 546 |
| | (c) Transport & Communication | 416 | 496 | 408 | 397 | 597 | 531 | 453 | 568 | 463 | 393 | 449 |
| | (d) Personal Care & effects | 317 | 332 | 348 | 329 | 338 | 296 | 334 | 323 | 361 | 300 | 308 |
| | (e) Others | 394 | 405 | 425 | 515 | 366 | 297 | 320 | 321 | 302 | 445 | 281 |
| | Miscellaneous Group | 435 | 443 | 463 | 392 | 383 | 340 | 371 | 350 | 410 | 406 | 346 |
| | **GENERAL INDEX** | **420** | **438** | **456** | **448** | **396** | **385** | **414** | **437** | **403** | **481** | **372** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

For Director.

**Government of India,**

**Ministry of Labour and Employment**

**Labour Bureau**

**CONSUMER PRICE INDEX NUMBERS FOR INDUSTRIAL WORKERS ON BASE-2001=100**

State: Karnataka Dated: Month/Year: 09/2009

| Group/Sub-group | Bangalore | Belgaum | Hubli-Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **Food Sub-Groups** | | | | | |
| (a) Cereals & Products | 200 | 179 | 187 | 174 | 191 |
| (b) Pulses & Products | 233 | 250 | 254 | 229 | 216 |
| (c) Oils & Fats | 163 | 176 | 161 | 162 | 151 |
| (d) Meat, Fish & Eggs | 192 | 206 | 203 | 179 | 195 |
| (e) Milk & Milk Products | 148 | 139 | 120 | 143 | 152 |
| (f) Condiments & Spices | 161 | 153 | 165 | 149 | 180 |
| (g) Vegetables & Fruits | 166 | 210 | 182 | 160 | 166 |
| (h) Other Food | 190 | 177 | 171 | 191 | 177 |
| **I. FOOD GROUP** | 184 | 182 | 178 | 175 | 179 |
| II-Pan, Supari, Tobacco & Intoxicants | 173 | 156 | 151 | 132 | 164 |
| III-Fuel & Light Group | 126 | 144 | 140 | 220 | 147 |
| V-Housing Group | 179 | 156 | 180 | 113 | 169 |
| IV-Clothing, Bedding & Footwear | 111 | 121 | 123 | 128 | 113 |
| **Miscellaneous Sub-groups:** | | | | | |
| (a) Medical Care | 165 | 160 | 139 | 157 | 145 |
| (b) Education, Recreation & Amusement | 141 | 146 | 156 | 168 | 119 |
| (c) Transport & Communication | 202 | 188 | 184 | 160 | 169 |
| (d) Personal Care & effects | 147 | 142 | 151 | 138 | 154 |
| (e) Others Miscellaneous Iteme | 177 | 160 | 156 | 175 | 176 |
| **VI. Miscellaneous Group** | 168 | 159 | 156 | 154 | 149 |
| **Centre Index** | 171 | 167 | 167 | 164 | 165 |

**HARITA SABHARWAL**

PR-1237 DEPUTY DIRECTOR.

**DEPARTMENT OF COMMERCIAL TAXES**

**Office of the Commissioner of Commercial Taxes in Karnataka, Gandhinagar, Bangalore**

**NOTIFICATION**

**No.KSA.CR.142/09-10, Bangalore, Dated:18th November, 2009**

In exercise of the powers conferred by clause (a) of sub-rule (1) of Rule 157 of the Karnataka Value Added Tax Rules, 2005, it is hereby notified that, with effect from 25th day of November, 2009, the following goods shall be carried, whether as a result of sale or not, on the strength of a delivery note in Form VAT 505 issued by the registered dealer, who is the consignor or owner of such goods, namely:

(1) Pepper.

(2) Slabs and tiles of granite.

(3) Slabs and tiles of marble.

**PRADEEP SINGH KHAROLA**

PR-1238 Commissioner of Commercial Taxes

in Karnataka, Bangalore.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎಸ್‌ಡಿಕೆ/429/ಡಿಟಿಸಿಆರ್/2008–09, ದಿನಾಂಕ:10ನೇ ನವೆಂಬರ್, 2009**

**ಉಪಸ್ಥಿತರು:**ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ಎದುರುದಾರರು** |
|---|---|
| ಅಬಕಾರಿ ಉಪ ನಿರೀಕ್ಷಕರು (2)<br>ಮಂಗಳೂರು ಉತ್ತರ ವಲಯ–1, ಮಂಗಳೂರು. | 1) ನಿಶಾಜ್ ಎಂ.ಪಿ. ಬಿನ್ ಕುನ್ನಿಕಣ್ಣನ್, ನಿರಂಜನಂ ಹೌಸ್ ನಂ.583/8, ಚೆಯನ್ ಚೆರಿ ಚೆಂಚರಿ, ಕಕ್ಕರಾ ಅಂಚೆ. ತಾಲಿಪರಂಬ (ವಾಹನದ ಮಾಲೀಕರು)<br>2) ಅಬ್ದುಲ್ ರೆಹಿಮಾನ್, ಅಲಾಸ್ ಕಟ್ಟೆ ಅಡ್ರಾಮ್, ಬಿನ್ ಕೆ.ಎ. ಅಹ್ಮದ್ ಉದಯನಗರ, ಕುಂಜತ್ತೂರು ಗ್ರಾಮ, ಕೇರಳ ರಾಜ್ಯ.<br>3) ಜಯರಾಮ ಶೆಟ್ಟಿ ಬಿನ್ ಗಂಗಾಧರ ಶೆಟ್ಟಿ, ಚಾರಿಯ ಹೌಸ್, ಕುಂಜತ್ತೂರು ಗ್ರಾಮ, ಕೇರಳ ರಾಜ್ಯ.<br>4) ಸುಧೀರ್ ಕುಮಾರ್ ಅಲಿಯಾಸ್ ಕಬಡ್ಡಿ ಸುಧೀರ್, ವಾಮಂಜೂರು, ಮಂಗಳೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–I, ಮಂಗಳೂರು ಇವರು ತಮ್ಮ ಸಿಬ್ಬಂದಿಯವರೊಂದಿಗೆ ದಿನಾಂಕ:18.06.2009ರಂದು ರಸ್ತೆಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ಮುಂಜಾನೆ 4.50 ಗಂಟೆ ಸಮಯಕ್ಕೆ ಮಂಗಳೂರು ತಾಲ್ಲೂಕು ಬೈಕಂಪಾಡಿ ಗ್ರಾಮದ ರಾಷ್ಟ್ರೀಯ ಹೆದ್ದಾರಿ 17 ರಿಂದ ಬೈಕಂಪಾಡಿ ಜೋಕಟ್ಟೆ ದಾರಿಯಲ್ಲಿ ರಾಷ್ಟ್ರೀಯ ಹೆದ್ದಾರಿಯಿಂದ ಸುಮಾರು 50 ಮೀಟರು ದೂರದಲ್ಲಿ ರಸ್ತೆಯ ಎಡಭಾಗದಲ್ಲಿ ವಾಹನ ಟಾಟಾ ಮಿನಿ ಲಾರಿ ಸಂಖ್ಯೆ:ಕೆಎಲ್–13–ಎಫ್–5907 ನಿಂತಿರುವುದನ್ನು ಕಂಡು ಅದರ ಒಳಗಡೆ ಇದ್ದ ಒರ್ವ ವ್ಯಕ್ತಿಯೊಂದಿಗೆ ವಾಹನದಲ್ಲಿ ಏನಿದೆ ಎಂದು ವಿಚಾರಿಸಲಾಗಿ ಆತನು ಸಮರ್ಪಕವಾಗಿ ಉತ್ತರ ನೀಡದೇ ಇರುವ ಪ್ರಯುಕ್ತ ಅನುಮಾನಗೊಂಡು, ಸದ್ರಿ ವಾಹನವನ್ನು ತಪಾಸಣೆ ನಡೆಸುವರೇ ಪಂಚ ಸಾಕ್ಷಿದಾರರಿಗಾಗಿ ಹತ್ತಿರದಲ್ಲಿ ಮನೆ ಯಾ ಅಂಗಡಿಗಳು ಇಲ್ಲದ ಕಾರಣ ಹಾಗೂ ಮುಂಜಾನೆ ಸಮಯವಾಗಿರುವುದರಿಂದ ಪಂಚರು ಸಿಗದೇ ಇರುವ ಕಾರಣ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿಸಿಕೊಂಡು ಸದ್ರಿ ವಾಹನವನ್ನು ತಪಾಸಣೆ ಮಾಡಲು ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆಯಲು ಸಮಾಯಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 54ರ ಪ್ರಕಾರ ಕಾರಣಗಳನ್ನು ನಮೂದಿಸಿ ಶೋಧನೆಗೆ ಸಮುಚಿತ ಆಧಾರವನ್ನು ದಾಖಲಿಸಿಕೊಂಡು, ಸದ್ರಿ ಲಾರಿಯನ್ನು ಶೋಧಿಸಿದಾಗ ಲಾರಿಯ ಹಿಂಬದಿಯಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ 14 ನೀಲಿ ಬಣ್ಣದ ಪ್ಲಾಸ್ಟಿಕ್ ಬ್ಯಾರೆಲ್‌ಗಳಲ್ಲಿ ತಲಾ 200 ಲೀಟರಿನಂತೆ ಒಟ್ಟು 2800.000 ಲೀಟರು ಮದ್ಯಸಾರವನ್ನು ಟಾರ್ಪಾಲು ಹೊದಿಕೆಯ ಮರೆಯಲ್ಲಿ ಇಟ್ಟುಕೊಂಡು ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13ರ ಪ್ರಕಾರ ಅಪರಾಧವಾಗಿದ್ದು ಮತ್ತು 32, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸೊತ್ತು ಮತ್ತು ವಾಹನವನ್ನು ಜಪ್ತು ಮಾಡಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಪತ್ತೆಯಾದ ಮದ್ಯಸಾರದ ಪ್ರತಿ ಬ್ಯಾರೆಲ್‌ಗಳಿಂದ 750 ಮಿಲಿಯಷ್ಟು ಮದ್ಯಸಾರವನ್ನು ಮಾದರಿಯಾಗಿ ಪ್ರತ್ಯೇಕಿಸಿ, ಪರಾರಿಯಾದ ಆರೋಪಿಗಳ ಬಗ್ಗೆ ವಾಹನದಲ್ಲಿದ್ದ ಚಾಲಕನಿಂದ ದೊರೆತ ಮಾಹಿತಿ ಪ್ರಕಾರ, ಚಾಲಕ ಮತ್ತು ಇತರ ವ್ಯಕ್ತಿಗಳಾದ (1) ಕೆ.ಎ. ಅಬ್ದುಲ್ ರಹಿಮಾನ್ ಯಾನೆ ಕಟ್ಟೆ ಅದ್ರಾಮ್, 40 ವರ್ಷ, ಬಿನ್ ಕೆ.ಎ. ಅಹಮದ್, ಉದಯನಗರ, ಕುಂಜತ್ತೂರು ಗ್ರಾಮ, ಕೇರಳ ರಾಜ್ಯ (ವಾಹನ ಚಾಲಕ) (2) ಜಯರಾಮಶೆಟ್ಟಿ ಬಿನ್ ಗಂಗಾಧರ ಶೆಟ್ಟಿ, ಚಾರ್ಲ್ಲ ಮನೆ, ಕುಂಜತ್ತೂರ್ ಅಂಚೆ, ಕೇರಳ ರಾಜ್ಯ ಮತ್ತು (3) ಸುಧೀರ್ ಕುಮಾರ್, ಯಾನೆ ಕಬಡ್ಡಿ ಸುಧೀರ್, ವಾಮಂಜೂರು, ಮಂಗಳೂರು ಇವರುಗಳ ವಿರುದ್ಧ ತಕ್ಷೀರು ಸಂಖ್ಯೆ:2/09–10, ದಿನಾಂಕ:18.06.2009ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು, ಜಪ್ತುಪಡಿಸಿದ ಸೊತ್ತುಗಳನ್ನು ಅಂತಿಮ ವರದಿ ಸಲ್ಲಿಸುವ ತನಕ ತನ್ನ ವಶದಲ್ಲಿಯೇ ಇಟ್ಟುಕೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪ್ರಾಧಿಕಾರದಲ್ಲಿ ಅನುಮತಿಯನ್ನು ಕೋರಿದ ಮೇರೆಗೆ ದಿನಾಂಕ:24.06.2009ರಂದು ಅನುಮತಿಯನ್ನು ನೀಡಲಾಗಿರುತ್ತದೆ.

ಮೊಕದ್ದಮೆ ಪತ್ತೆ ಹಚ್ಚಿ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–I, ಮಂಗಳೂರು ಇವರು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆಯಲಾದ 750 ಎಂಎಲ್‌ನ 14 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರುರವರ ಪತ್ರ ಸಂಖ್ಯೆ:262–14, ದಿನಾಂಕ:15.07.2009ರ ವರದಿಯಲ್ಲಿ ಮದ್ಯಸಾರದಲ್ಲಿ ಮದ್ಯಸಾರ ಪ್ರಮಾಣ 94.0% ಇರುವುದಾಗಿ ಹಾಗೂ ಮದ್ಯಸಾರದ ಮಾದರಿಗಳನ್ನು ಭಟ್ಟಿ ಇಳಿಸಿದ ಅನಂತರದಲ್ಲಿ ಮಾದಕ ಪಾನೀಯ ತಯಾರಿಕೆ ಹಾಗೂ ಕೈಗಾರಿಕಾ ಉದ್ದಿಮೆಗಳಲ್ಲಿ ಉಪಯೋಗಿಸಬಹುದೆಂದು ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಸದ್ರಿ ವಿಶ್ಲೇಷಣಾ ವರದಿಯೊಂದಿಗೆ ಪ್ರಕರಣದ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು (2) ಮಂಗಳೂರು ಉತ್ತರ

ವಲಯ– I ಇವರು ದಿನಾಂಕ:21.08.2009ರಂದು ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ 2800 ಲೀ. ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕಾಗಿ ಕೋರಿರುತ್ತಾರೆ. ಆ ಪ್ರಕಾರ ಜಪ್ತುಪಡಿಸಿಕೊಂಡ 2800 ಲೀ ಮದ್ಯಸಾರವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಪ್ರಸ್ತುತ ಸರ್ಕಾರದ ಅಧಿಸೂಚನೆಯಂತೆ ನಾಶಪಡಿಸಲು ದಿನಾಂಕ:24.08.2009ರಂದು ಪ್ರಾಧಿಕಾರದಿಂದ ಆದೇಶಿಸಲಾಗಿರುತ್ತದೆ. ಸದ್ರಿ ಆದೇಶದಂತೆ ಮದ್ಯಸಾರವನ್ನು ದಿನಾಂಕ:26.08.2009ರಂದು ನಾಶಪಡಿಸಿ ತನಿಖಾಧಿಕಾರಿಗಳು ದಿನಾಂಕ:28.08.2008ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ತನಿಖಾಧಿಕಾರಿಗಳು ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಣ್ಣೂರು, ಕೇರಳ ರಾಜ್ಯ ಇವರಿಗೆ ಪತ್ರ ಬರೆದು, ಸದ್ರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ ನಿಶಾಜ್ ಎಂ.ಪಿ. ಬಿನ್ ಕುಂಜ್ಞಿ ಕಣ್ಣನ್, ನಿರಂಜನಮ್ ಹೌಸ್ ನಂ.583/8, ಚೆಯನ್ ಚೇರಿ, ಚೆಂಚರಿ, ಕಕ್ಕಾರ ಅಂಚೆ, ತಾಲಿಪರಂಬ, ಕೇರಳ ರಾಜ್ಯ ಇವರು ದಿನಾಂಕ:13.11.2007ರ ನಂತರದಲ್ಲಿ ಸದ್ರಿ ವಾಹನ ಸಂಖ್ಯೆ: ಕೆಎಲ್–13–ಎಫ್–5907 ಟಾಟಾ ಮಿನಿ ಲಾರಿ ಇದರ ನೊಂದಾಣಿ ಮಾಲೀಕರಾಗಿರುವುದಾಗಿ ಕಂಡು ಬಂದಿರುತ್ತದೆ.

ಪ್ರಕರಣದ ಮುಟ್ಟುಗೋಲು ನಡವಳಿ ಪ್ರಕ್ರಿಯೆ ನಡೆಸುವ ಪೂರ್ವದಲ್ಲಿ ಪ್ರಕರಣದ ಆರೋಪಿತ ವ್ಯಕ್ತಿಗಳಾದ (1) ಕೆ.ಎ. ಅಬ್ದುಲ್ ರಹಿಮಾನ್ ಯಾನೆ ಕಟ್ಟೆ ಅದ್ರಾಮ್, 40 ವರ್ಷ, ಬಿನ್ ಕೆ.ಎ. ಅಹಮದ್, ಉದಯನಗರ, ಕುಂಜತ್ತೂರು ಗ್ರಾಮ, ಕೇರಳ ರಾಜ್ಯ (ವಾಹನ ಚಾಲಕ), (2) ಜಯರಾಮ ಶೆಟ್ಟಿ, ಬಿನ್ ಗಂಗಾಧರ ಶೆಟ್ಟಿ, ಚಾರ್ಲ ಮನೆ, ಕುಂಜತ್ತೂರ್ ಅಂಚೆ, ಕೇರಳ ರಾಜ್ಯ ಮತ್ತು (3) ಸುಧೀರ್ ಕುಮಾರ್ ಯಾನೆ ಕಬಡ್ಡಿ ಸುಧೀರ್, ವಾಮಂಜೂರು ಇವರಿಗೆ ಮತ್ತು ಬಿ ವರದಿಯಲ್ಲಿ ನಮೂದಿತವಾದ ವಾಹನದ ಮಾಲೀಕರಾದ ಶ್ರೀ ನಿಶಾಜ್ ಎಂ.ಪಿ. ಬಿನ್ ಕುಂಜ್ಞಿ, ಕಣ್ಣನ್, ನಿರಂಜನಮ್ ಹೌಸ್, ನಂ.583/8, ಚೆಯನ್ ಚೇರಿ, ಚೆಂಚರಿ, ಕಕ್ಕಾರ ಅಂಚೆ, ತಾಲಿಪರಂಬ, ಕೇರಳ ರಾಜ್ಯ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ಈ ಪ್ರಾಧಿಕಾರದಿಂದ ದಿನಾಂಕ:15.10.2009 ರಂದು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟೀಸು ಆರೋಪಿತ ವ್ಯಕ್ತಿಯಾದ ಜಯರಾಮ ಶೆಟ್ಟಿ ಇವರಿಗೆ ದಿನಾಂಕ:22.10.2009ರಂದು ಜಾರಿಯಾಗಿದ್ದು, ಸದ್ರಿಯವರು ದಿನಾಂಕ:28.10.2009ರಂದು ಪ್ರಾಧಿಕಾರಕ್ಕೆ ಉತ್ತರ ನೀಡಿ ಪ್ರಕರಣಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ, ಪ್ರಕರಣದಲ್ಲಿ ಹೊರಿಸಲಾದ ಆರೋಪವನ್ನು ಅಲ್ಲಗಳೆದಿರುತ್ತಾರೆ. ಹಾಗೂ ಇನ್ನಿಬ್ಬರು ಆರೋಪಿತರ ಪೈಕಿ ಸುಧೀರ್ ಯಾನೆ ಕಬಡ್ಡಿ ಸುಧೀರ್ ಇವರಿಗೆ ನೀಡಲಾದ ನೋಟಿಸು ಜಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸು ಬಂದಿದ್ದು, ಮತ್ತೊರ್ವ ಆರೋಪಿಯಾದ ಅಬ್ದುಲ್ ರಹಿಮಾನ್ ಇವರಿಗೆ ನೀಡಲಾದ ನೋಟಿಸು ದಿನಾಂಕ:31.10.2009ರಂದು ಜಾರಿಯಾಗಿದ್ದು, ಸದ್ರಿಯವರಿಂದ ಯಾವುದೇ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಹಾಗೂ ವಾಹನದ ನೊಂದಾಯಿತ ಮಾಲೀಕರಾದ ಶ್ರೀ ನಿಶಾಜ್ ಎಂ.ಪಿ. ಇವರಿಗೆ ಸದ್ರಿ ನೋಟಿಸು ಜಾರಿಯಾಗಿದ್ದು, ಸದ್ರಿಯವರು ದಿನಾಂಕ:24.10.2009ರಂದು ಪ್ರಾಧಿಕಾರಕ್ಕೆ ನೀಡಿದ ಉತ್ತರದಲ್ಲಿ ವಾಹನವನ್ನು ಪರಭಾರೆ ಮಾಡುವ ಸಲುವಾಗಿ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ವರ್ಗಾವಣೆ ಮಾಡಿಕೊಳ್ಳಲಾಗಿದ್ದು, ಆದರೆ ವಾಹನ ಪಡಕೊಂಡ ವ್ಯಕ್ತಿಯು ಹೆಸರು ಬದಲಾವಣೆ ಮಾಡಿಕೊಳ್ಳಲು ಸೂಕ್ತ ಕ್ರಮ ಕೈಗೊಳ್ಳದೇ ಇರುವುದರಿಂದ ಈ ಬಗ್ಗೆ ಠಾಣಾಧಿಕಾರಿಗಳಲ್ಲಿ ದೂರು ದಾಖಲಿಸಲಾಗಿದೆ ಎಂದು ತಿಳಿಸಿ, ಸದ್ರಿ ವಾಹನಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ಸ್ಪಷ್ಟಪಡಿಸಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:18.06.2009ರಂದು ಟಾಟಾ ಮಿನಿ ಲಾರಿ ಸಂಖ್ಯೆ:ಕೆಎಲ್–13–ಎಫ್–5907 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 2800 ಲೀ ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–I ಇವರ ಪ್ರಮಾವ ಸಂ:2/2009–10, ದಿನಾಂಕ:18.06.2009ರಂತೆ ಪ್ರಕರಣದ ದಾಖಲಿಸಿಕೊಂಡಿರುವುದು ಹಾಗೂ ಅದೇ ಅಬಕಾರಿ ಅಧಿಕಾರಿಗಳು ಪ್ರಕರಣದ ತನಿಖೆಯನ್ನು ಕೈಗೊಂಡು ವಾಹನದೊಂದಿಗೆ ಜಪ್ತುಪಡಿಸಲಾಗಿರುವ ಮದ್ಯಸಾರವನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ, ಪಡೆಯಲಾದ ರಾಸಯನಿಕ ತಜ್ಞರ ವರದಿಯಂತೆ ಸದ್ರಿ ವಸ್ತು ಮದ್ಯಸಾರವಾಗಿದ್ದು, ಹಾಗೂ ವಾಹನದ ಮಾಲೀಕರ ಬಗ್ಗೆ ತಿಳಿದುಕೊಳ್ಳಲು ತನಿಖಾಧಿಕಾರಿಗಳು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ವ್ಯವಹಾರ ನಡೆಸಿ ಪಡೆಯಲಾದ ವರದಿಯಲ್ಲಿ ನಮೂದಿತವಾದ ವಾಹನದ ಮಾಲೀಕರಾದ ಶ್ರೀ ನಿಶಾಜ್ ಎಂ.ಪಿ. ಬಿನ್ ಕುಂಜ್ಞಿ ಕಣ್ಣನ್‌ರಿಗೆ ಈ ಪ್ರಾಧಿಕಾರದಿಂದ ಅಬಕಾರಿ ಕಾಯಿದೆ 1965ರ ಕಲಂ 43ಬಿ ರ ಪ್ರಕಾರ ನೀಡಲಾದ ನೋಟಿಸಿಗೆ ಸದ್ರಿಯವರು ಉತ್ತರಿಸಿ ವಾಹನವನ್ನು ಈಗಾಗಲೇ ಪರಭಾರೆ ಮಾಡಿರುವುದರಿಂದ, ತನಗೂ

ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುವುದರಿಂದ ವಾಹನದ ಬಗ್ಗೆ ಯಾರಿಂದಲೂ ಬೇಡಿಕೆ ಇಲ್ಲವೆಂದು ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಮೇಲಿನ ವಿದ್ಯಾಮಾನಗಳ ಸಂದರ್ಭದಲ್ಲಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ವಾಹನದ ಮಾಲೀಕರಾಗಲೀ, ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇದ್ದುದರಿಂದ, ಪ್ರತಿ ರಕ್ಷಾ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:18.06.2009 ರಂದು ಲಾರಿ ಸಂಖ್ಯೆ: ಕೆಎಲ್–13–ಎಫ್–5907 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 2800 ಲೀ. ಮದ್ಯಸಾರವನ್ನು ಸಾಗಾಣಿಕೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯ ಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–1 ರವರು ದಿನಾಂಕ:03.11.2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಪಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಜೂನ್–2006 ರಿಂದ ಈತನಕ ಮಂಗಳೂರು ಉತ್ತರ ವಲಯ–1ರಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:18.06.2009ರಂದು ಮುಂಜಾನೆ 4.50 ಗಂಟೆ ಸಮಯಕ್ಕೆ ರಸ್ತೆ ಗಾವಲು ನಡೆಸುತ್ತಿದ್ದಾಗ ಮಂಗಳೂರು ತಾಲ್ಲೂಕಿನ ಬೈಕಂಪಾಡಿ ಗ್ರಾಮದ ರಾಷ್ಟ್ರೀಯ ಹೆದ್ದಾರಿ 17 ರಿಂದ ಬೈಕಂಪಾಡಿ ಜೊಕಟ್ಟೆಗೆ ಹೋಗುವ ದಾರಿಯಲ್ಲಿ ರಾಷ್ಟ್ರೀಯ ಹೆದ್ದಾರಿಯಿಂದ ಸುಮಾರು 50 ಮೀಟರು ದೂರದಲ್ಲಿ ರಸ್ತೆ ಎಡಭಾಗದಲ್ಲಿ ಒಂದು ವಾಹನ ನಿಂತಿರುವುದನ್ನು ಕಂಡು, ಬಳಿಗೆ ಹೋಗಿ ವಾಹನದಲ್ಲಿ ಕುಳಿತ್ತಿದ್ದ ಚಾಲಕನಲ್ಲಿ ವಿಚಾರಿಸಿದಾಗ ಆತನು ಸಮರ್ಪಕ ಉತ್ತರ ನೀಡದೇ ಇರುವ ಪ್ರಯುಕ್ತ ಅನುಮಾನಗೊಂಡು ವಾಹನವನ್ನು ಶೋಧಿಸಲು ಪಂಚರನ್ನು ಹುಡುಕಲಾಗಿ ಮುಂಜಾನೆಯ ಸಮಯವಾಗಿರುವುದರಿಂದ ಪಂಚರಾಗಿ ಸಹಕರಿಸಲು ಯಾರೂ ಸಿಗದೇ ಇರುವ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿ, ವಾಹನವನ್ನು ಶೋಧಿಸಿ ನ್ಯಾಯಾಲಯದಿಂದ ಸರ್ಚ್ ವಾರೆಂಟನ್ನು ಪಡೆಯಲು ಕಾಲಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 54ರಂತೆ ಸರ್ಚ್ ಮೆಮೋವನ್ನು ತಯಾರಿಸಿ ಸದ್ರಿ ವಾಹನವನ್ನು ಪರಿಶೀಲಿಸಲಾಗಿ ವಾಹನವು ಟಾಟಾ ಕಂಪೆನಿಯ 407 ಮಾದರಿಯ ಮಿನಿ ಲಾರಿಯಾಗಿದ್ದು, ನೊಂದಣಿ ಸಂಖ್ಯೆ: ಕೆಎಲ್–13–ಎಫ್–5907 ಯಾಗಿದ್ದು, ಹಸಿರು ಬಣ್ಣದ್ದಾಗಿರುತ್ತದೆ. ವಾಹನದ ಹಿಂಭಾಗದಲ್ಲಿ ಪರಿಶೀಲಿಸಿದಾಗ 14 ನೀಲಿ ಬಣ್ಣದ 200 ಲೀಟರು ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರೆಲ್‌ಗಳಲ್ಲಿ ಮದ್ಯಸಾರ ಇರುವುದು ಕಂಡುಬಂತು. ಸದ್ರಿ ಬ್ಯಾರೆಲ್‌ಗಳ ಮುಚ್ಚಳಗಳನ್ನು ತೆರೆದು ಪರಿಶೀಲಿಸಲಾಗಿ ಒಟ್ಟು 2800 ಲೀಟರು ಮದ್ಯಸಾರ ಇರುವುದು ಪತ್ತೆಯಾಯಿತು. ಸದ್ರಿ ಬ್ಯಾರೆಲ್‌ಗಳು ಕಾಣದಂತೆ ಒಂದು ಟಾರ್ಪಾಲಿನಿಂದ ಹೊದಿಕೆ ಮಾಡಲಾಗಿತ್ತು. ನಂತರ ಸದ್ರಿ ಮದ್ಯಸಾರವನ್ನು ಸಾಗಿಸಲು ಅಧಿಕೃತ ದಾಖಲೆಗಳು ಏನಾದರೂ ಇದೆಯೋ? ಎಂದು ವಾಹನದಲ್ಲಿದ್ದ ವ್ಯಕ್ತಿಯನ್ನು ವಿಚಾರಿಸಲಾಗಿ ಯಾವುದು ಇಲ್ಲವೆಂದು ಆತನು ತಿಳಿಸಿದನು. ಅಧಿಕೃತ ದಾಖಲಾತಿಗಳು ಇಲ್ಲದೇ ಮದ್ಯಸಾರವನ್ನು ಸಾಗಿಸುವುದು ಕಾನೂನು ರೀತ್ಯಾ ಅಪರಾಧ ಎಂದು ಈ ಬಗ್ಗೆ ಮೊಕದ್ದಮೆಯನ್ನು ದಾಖಲಿಸಲಾಗುವುದೆಂದು ಆತನಿಗೆ ತಿಳಿಸಲಾಯಿತು. ಹಾಗೂ ಈ ಕೃತ್ಯದಲ್ಲಿ ಬೇರೆ ಯಾರು ಭಾಗಿಯಾಗಿರುತ್ತಾರೆಂದು ಆತನನ್ನು ಕೇಳಲಾಗಿ ಸದ್ರಿ ಮದ್ಯಸಾರವನ್ನು ಜಯರಾಮ ಶೆಟ್ಟಿ ಮತ್ತು ಸುಧೀರ್ ಕುಮಾರ್ ಯಾನೆ ಕಬಡ್ಡಿ ಸುಧೀರ್ ಮತ್ತು ಪ್ರದ್ವಿ ಯಾನೆ ಪ್ರೀತಿಪಾಲ್ ಅಡಂತ್ಯಾಯ ಎಂಬ ನಾವೆಲ್ಲ ಸೇರಿ ಮದ್ಯ ಮತ್ತು ಸಾರಾಯಿ ತಯಾರಿಕೆ ಬಗ್ಗೆ ಸಾಗಾಟ ಮಾಡುತ್ತಿರುವುದಾಗಿ ತಿಳಿಸಿದನು. ಸದ್ರಿ ಮದ್ಯಸಾರ ಎಲ್ಲಾ ಬ್ಯಾರೆಲ್‌ಗಳಿಂದ 750 ಎಂಎಲ್‌ನಷ್ಟು ಮದ್ಯಸಾರವನ್ನು ಬಾಟಲಿಗಳಿಗೆ ತುಂಬಿಸಿ ಇಲಾಖಾ ಮುದ್ರೆ ಕ್ರಮವನ್ನು ಅನುಸರಿಸಿ ರಾಸಾಯನಿಕ ಪರೀಕ್ಷೆಗಾಗಿ ತೆಗೆದಿರಿಸಲಾಯಿತು. ಒಂದು ಮಾದರಿ ಸೀಲನ್ನು ತಯಾರಿಸಿ, ಆರೋಪಿಯ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಆತನು ತನ್ನ ಹೆಸರು ಅಬ್ದುಲ್ ರಹಿಮಾನ್ ಯಾನೆ ಕಟ್ಟೆ ಅದ್ರಾಮ್ ಬಿನ್ ಕೆ.ಎ. ಅಹ್ಮದ್ ಉದಯನಗರ, ಕುಂಜತ್ತೂರು ಗ್ರಾಮ, ಕೇರಳ ರಾಜ್ಯ ಎಂದು ತಿಳಿಸಿದಂತೆ ಆತನ ಹೆಸರು ವಿಳಾಸವುಳ್ಳ ಗುರುತು ಚೀಟಿಗಳನ್ನು ಮಾದರಿ ಸೀಸೆ ಮತ್ತು ದೊರೆತ ಸೊತ್ತುಗಳಿಗೆ ಅಂಟಿಸಲಾಯಿತು. ಬ್ಯಾರೆಲ್‌ಗಳ ಬಾಯಿ ಭದ್ರಪಡಿಸಿ ಮೊಹರು ಮಾಡಲಾಯಿತು. ನಂತರ ಆರೋಪಿಯನ್ನು ದಸ್ತಗಿರಿ ಮಾಡುವ ವಿಚಾರವನ್ನು ಆರೋಪಿಗೆ ಹಾಗೂ ಆತನು ತಿಳಿಸಿದ ಸಂಬಂಧಿಕರಾದ ಅಜೀಜ್ ಎಂಬವರಿಗೆ ಫೋನ್ ಮೂಲಕ ತಿಳಿಸಿ, ದೊರೆತ ಸೊತ್ತು ಹಾಗೂ ಆರೋಪಿಯನ್ನು ಮಹಜರ ಮೂಲಕ ಇಲಾಖಾ ವಶಕ್ಕೆ ತೆಗೆದುಕೊಂಡು ಕಛೇರಿಗೆ ಬರಲಾಯಿತು. ಆರೋಪಿಯನ್ನು ಪ್ರ.ಮಾ.ವ. ಹಾಗೂ ಸಂಬಂಧಿತ ದಾಖಲಾತಿಗಳೊಂದಿಗೆ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಲಾಯಿತು. ಸ್ಥಳದಲ್ಲಿಯೇ ತಯಾರಿಸಲಾದ ಮಹಜರು ಪ್ರತಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಅದನ್ನು ಈಗ ನೋಡಿ ನಿಶಾನೆ ಪಿ–1, ಅದರ ಮೇಲಿನ ಸಹಿಯನ್ನು ನಿಶಾನೆ ಪಿ–1ಎ ಎಂದು, ತಯಾರಿಸಲಾದ ಪ್ರಥಮ ಮಾಹಿತಿ

ವರದಿಯ ಪ್ರತಿಯನ್ನು ನೋಡಿ ನಿಶಾನೆ ಪಿ–2 ಎಂದು, ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2ಎ ಎಂದು, ಸೊತ್ತು ಪಟ್ಟಿ ಪ್ರತಿಯನ್ನು ನಿಶಾನೆ ಪಿ–3 ಎಂದು, ಅದರ ಮೇಲಿನ ಸಹಿಯನ್ನು ನಿಶಾನೆ ಪಿ–3ಎ ಎಂದು, ಕರ್ನಾಟಕ ಅಬಕಾರಿ ಕಾಯಿದೆ ನಿಯಮ 54ರಂತೆ ತಯಾರಿಸಲಾದ ಶೋಧನಾ ಸಮುಚಿತ ವಾರೆಂಟನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ಪ್ರಕರಣದ ತನಿಖೆಯನ್ನು ತನಿಖಾಧಿಕಾರಿಯಾಗಿ ನಾನೇ ಮುಂದುವರಿಸಿ ಕೊಂಡು ಪ್ರಕರಣದಲ್ಲಿ ಜಪ್ತುಪಡಿಸಿದ ಮದ್ಯಸಾರದಿಂದ ತೆಗೆಯಲಾದ ಬಾಟಲಿಗಳನ್ನು ಮಾದರಿ ವಿಶ್ಲೇಷಣೆಗಾಗಿ ಶ್ರೀ ಬಿ.ಸುರೇಂದ್ರ, ಅ.ರ. ಇವರ ಮೂಲಕ ಮಂಗಳೂರು ವಿಭಾಗದ ರಾಸಾಯನಿಕ ವಿಶ್ಲೇಷಣೆಗೆ ದಿನಾಂಕ:01.07.2009ರಂದು ಕಳುಹಿಸಿಕೊಡಲಾಗಿದ್ದು, ವಿಶ್ಲೇಷಕರು ದಿನಾಂಕ:29.07.2009ರಂದು ನೀಡಿದ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ಈಗ ನೋಡಿ ನಿಶಾನೆ ಪಿ–5 ಎಂದು ಈಗ ಗುರುತಿಸಲಾಯಿತು. ಜಪ್ತು ಪಡಿಸಲಾದ ವಾಹನ ಸಂಖ್ಯೆ: ಕೆಎಲ್–13–ಎಫ್–5907 ಇದರ ಮಾಲೀಕತ್ವದ ಬಗ್ಗೆ ಬಿ. ವರದಿ ನೀಡುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಣ್ಣೂರು ಜಿಲ್ಲೆ ಇವರಿಗೆ ದಿನಾಂಕ:10.07.2009 ರಂದು ನೊಂದಾಯಿತ ಅಂಚೆ ಮೂಲಕ ಪತ್ರ ಬರೆಯಲಾಗಿದ್ದು, ಅದರ ಪ್ರತಿಯನ್ನು ಅಧಿಕೃತ ಅಧಿಕಾರಿಗಳ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಅದನ್ನು ಈಗ ನೋಡಿ ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಬಿ ವರದಿಯನ್ನು ದಿನಾಂಕ:07.10.2009ರಂದು ಸ್ವೀಕರಿಸಲಾಗಿದ್ದು, ಮೂಲ ಪ್ರತಿಯನ್ನು ಅಧಿಕೃತ ಅಧಿಕಾರಿಗಳು ನ್ಯಾಯಾಲಯಕ್ಕೆ ಸಲ್ಲಿಸಲಾಗಿದ್ದು, ಅದನ್ನು ಈಗ ನೋಡಿ ನಿಶಾನೆ ಪಿ–7 ಎಂದು ಗುರುತಿಸಲಾಯಿತು. ಜಪ್ತುಪಡಿಸಿಕೊಂಡ ಮದ್ಯಸಾರ ಹಾಗೂ ವಾಹನಕ್ಕೆ ಬೇಡಿಕೆ ಸಲ್ಲಿಸಿ, ಯಾರೊಬ್ಬರೂ ಮುಂದೆ ಬಾರದೇ ಇರುವುದರಿಂದ, ಹಾಗೂ ಪ್ರಕರಣ ದಾಖಲಿಸಿ 2 ತಿಂಗಳ ಕಾಲ ಮೀರಿದ್ದರೂ ಈ ಬಗ್ಗೆ ಯಾರೊಬ್ಬರೂ ನನ್ನ ಕಛೇರಿಯನ್ನು ಸಂಪರ್ಕಿಸದೇ ಇರುವುದರಿಂದ ಸದ್ರಿ ಸೊತ್ತುಗಳಿಗೆ ಯಾರೊಬ್ಬರ ಬೇಡಿಕೆ ಇಲ್ಲವೆಂದು ತೀರ್ಮಾನಿಸಿ ಜಪ್ತುಪಡಿಸಿದ ವಾಹನವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಂಡಲ್ಲಿ ಅದರ ಸ್ಥಿತಿಗತಿ ಕ್ಷೀಣಗೊಂಡು ಮೌಲ್ಯ ಕಳೆದುಕೊಂಡು ಇದರಿಂದ ಸರ್ಕಾರಕ್ಕೆ ನಷ್ಟ ಉಂಟಾಗುವ ಸಂಭವ ಇರುವುದರಿಂದ ಜಪ್ತುಪಡಿಸಿದ ಸೊತ್ತುಗಳನ್ನು ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ಪ್ರಚಲಿತ ಕಾನೂನಿಗೆ ಅನುಗುಣವಾಗಿ ನಾಶಪಡಿಸಲು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವಂತೆ ಶಿಫಾರಸ್ಸು ಮಾಡುವಂತೆ ದಿನಾಂಕ:21.08.2009 ರಂದು ಅಬಕಾರಿ ನಿರೀಕ್ಷಕರ ಮುಖಾಂತರ ಅಧಿಕೃತ ಅಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿ ನಿಶಾನೆ ಪಿ–8 ಎಂದು, ಅದರ ಮೇಲಿನ ಸಹಿಯನ್ನು ನಿಶಾನೆ ಪಿ–8ಎ ಎಂದು ಗುರುತಿಸಲಾಯಿತು. ಜಪ್ತು ಪಡಿಸಿದ ವಾಹನದ ಮೌಲ್ಯ ಮಾಪನ ವರದಿಯನ್ನು ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಪ್ರಾಧಿಕಾರದ ದಿನಾಂಕ:24.08.2009ರ ಆದೇಶದಂತೆ ಜಪ್ತುಪಡಿಸಲಾದ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು, ಅದರಂತೆ ದಿನಾಂಕ:26.08.2009ರಂದು ಮಹಜರು ಜರುಗಿಸಿ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯಸಾರವನ್ನು ನಾಶಪಡಿಸಿ ವರದಿ ಸಲ್ಲಿಸಿರುತ್ತೇನೆ. ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನವನ್ನು ಶೀಘ್ರದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಬೇಕೆಂದು ವಿನಂತಿಸಿಕೊಂಡಿರುತ್ತೇನೆ. ಪ್ರಕರಣದ ತನಿಖೆಯು ಅಂತಿಮ ಹಂತದಲ್ಲಿದ್ದು, ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲಾಗುವುದು. ಪ್ರಕರಣದಲ್ಲಿ ಆರೋಪಿಗಳ ಪೈಕಿ ಸುಧೀರ್ ಮತ್ತು ಜಯರಾಮ ಶೆಟ್ಟಿ ಎಂಬವರು ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿ ಸತ್ರ ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನು ಪಡೆದಿರುತ್ತಾರೆಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:** ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಲು ಉತ್ಸುಕರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:18.06.2009ರಂದು ಜಪ್ತುಪಡಿಸಿರುವ ಟಾಟಾ ಮಿನಿಲಾರಿ ಸಂಖ್ಯೆ: ಕೆಎಲ್–13–ಎಫ್–5907 ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಣಿಕೆ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನದ ಸುಪರ್ಧಿ ಹೊಂದಿರುವ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ವಾಹನದ ಮಾಲೀಕರ ಮಾಹಿತಿ ಬಗ್ಗೆ ಪಡೆಯಲಾದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಲಾದ ನೊಂದಾಯಿತ ಮಾಲೀಕರಾದ ಶ್ರೀ ನಿಶಾಜ್ ಎಂ.ಪಿ. ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಪ್ರಕಾರ ದಿನಾಂಕ:15.10.2009 ರಂದು ನೀಡಲಾದ ಕಾರಣ ಕೇಳಿ ನೋಟೀಸಿಗೆ ವಾಹನದ ಮಾಲೀಕರು ದಿನಾಂಕ:24.10.2009ರಂದು ಉತ್ತರ ಸಲ್ಲಿಸಿ, ವಾಹನವನ್ನು ಪ್ರಕರಣ ಪೂರ್ವದಲ್ಲಿಯೇ ಬೇರೆ ವ್ಯಕ್ತಿಯೊಬ್ಬರಿಗೆ ಪರಭಾರೆ ಮಾಡಿಕೊಳ್ಳಲಾಗಿದ್ದು, ಸದ್ರಿ ವಾಹನಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುವುದು ಹಾಗೂ ಪ್ರಕರಣದ ಆರೋಪಿತ ವ್ಯಕ್ತಿಗಳೂ ಕೂಡಾ ಪ್ರಕರಣಕ್ಕೆ ಸಂಬಂಧಿಸಿ ತಮ್ಮ ನಿರಪರಾಧಿತ್ವವನ್ನು ಸಾಭೀತುಪಡಿಸಲು ಪ್ರಯತ್ನಿಸದೇ ಇರುವುದು ಕಂಡು ಬರುತ್ತದೆ. ಪ್ರಕರಣ ದಾಖಲಾಗಿ ಸುಮಾರು 4 ತಿಂಗಳುಗಳು ಕಳೆದಿದ್ದರೂ ತನ್ನ ವಾಹನವನ್ನು ಪಡೆದುಕೊಳ್ಳುವ ಬಗ್ಗೆ ಕಾನೂನಿನಡಿ ಈ ಪ್ರಾಧಿಕಾರದಲ್ಲಿ ಮನವಿ ಮಾಡಿಕೊಳ್ಳದಿದ್ದು ಹಾಗೂ ಈ ಬಗ್ಗೆ ಪ್ರಾಧಿಕಾರದ ಮುಂದೆ ಹಾಜರಾಗಿ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಾಹನದ ಮಾಲೀಕರು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಯಾವೊಬ್ಬರೂ ಹಾಜರಾಗದೇ ಇರುವ ಅಂಶವನ್ನು ಗಮನಿಸಿದಾಗ ವಾಹನದ ಸ್ವಾಧೀನ

ಹೊಂದಿರುವವರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಟಾಟಾ ಮಿನಿ ಲಾರಿ ಸಂಖ್ಯೆ: ಕೆಎಲ್–13–ಎಫ್–5907 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ಉತ್ತರ ವಲಯ–1, ಮಂಗಳೂರು ಇವರ ತಕ್ಷೀರು ಸಂಖ್ಯೆ:2/2009–10 ದಿನಾಂಕ:18.06.2009ರಲ್ಲಿ ಜಪ್ತುಪಡಿಸಿ ಕೊಂಡಿರುವ ಟಾಟಾ ಮಿನಿ ಲಾರಿ ಸಂ:ಕೆಎಲ್–13–ಎಫ್–5907 ನ್ನು (ಚಾಸೀಸ್ ನಂ.357124HZZ819935 ಮತ್ತು ಇಂಜಿನ್ ನಂಬರು 497SPTC31HZZ761241)ನ್ನು ನಿಯಮ 43ಸಿ ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:10.11.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಪಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1: ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು (1), ಮಂಗಳೂರು ಉತ್ತರ ವಲಯ–1.

**ಅನುಬಂಧ–II**

**ಪಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು:**

ನಿಶಾನೆ ಪಿ–I : ಮಹಜರು ಪ್ರತಿ
ನಿಶಾನೆ ಪಿ–1ಎ : ಮಹಜರು ಮೇಲಿನ ಸಹಿ
ನಿಶಾನೆ ಪಿ–2: ಪ್ರಥಮ ವರ್ತಮಾನ ವರದಿ
ನಿಶಾನೆ ಪಿ–2ಎ: ಪ್ರಥಮ ವರ್ತಮಾನ ವರದಿ ಮೇಲಿನ ಸಹಿ
ನಿಶಾನೆ ಪಿ–3 : ಸೊತ್ತುಪಟ್ಟಿ
ನಿಶಾನೆ ಪಿ–3ಎ: ಸೊತ್ತುಪಟ್ಟಿ ಮೇಲಿನ ಸಹಿ
ನಿಶಾನೆ ಪಿ–4: ಶೋಧನಾ ಸಮುಚಿತ ವಾರೆಂಟ್
ನಿಶಾನೆ ಪಿ–5: ರಾಸಾಯನಿಕ ವಿಶ್ಲೇಷಣಾ ವರದಿ ಪ್ರತಿ
ನಿಶಾನೆ ಪಿ–6: ಪ್ರಾ.ಸಾ.ಅ. ಕಣ್ಣೂರು ಇವರಿಗೆ ದಿನಾಂಕ:10.07.2009 ರಂದು ಬರೆದ ಪತ್ರದ ಪ್ರತಿ
ನಿಶಾನೆ ಪಿ–7: ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ
ನಿಶಾನೆ ಪಿ–8 : ದಿನಾಂಕ:21.08.2009ರಂದು ಪ್ರಾಧಿಕಾರಕ್ಕೆ ಸಲ್ಲಿಸಿದ ತನಿಖಾ ವರದಿ.
ನಿಶಾನೆ ಪಿ–8ಎ : ದಿನಾಂಕ:21.08.2009 ರಂದು ಪ್ರಾಧಿಕಾರಕ್ಕೆ ಸಲ್ಲಿಸಿದ ತನಿಖಾ ವರದಿಯ ಮೇಲಿನ ಸಹಿ.

**ಅನುಬಂಧ–III**

ವಾಹನದ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:
ಅರ್ಜಿದಾರರ ಹೇಳಿಕೆ: –ಯಾವುದು ಇಲ್ಲ–

**ಅನುಬಂಧ–IV**

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1239

## ಆಯುಕ್ತರ ಕಾರ್ಯಾಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ಅಧಿಸೂಚನೆ

**ಸಂಖ್ಯೆ: ಇ.ಎಲ್.ಎನ್/ಪಿಆರ್/14/2009-10, ದಿನಾಂಕ:4ನೇ ಡಿಸೆಂಬರ್, 2009**

ಕರ್ನಾಟಕ ನಗರ ಪಾಲಿಕೆ (ಚುನಾವಣೆ) ನಿಯಮಗಳು 1979ರ ನಿಯಮ 4ರ ಮೇರೆಗೆ ಆಯುಕ್ತರವರುಗಳಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಾದ ಭರತ್ ಲಾಲ್ ಮೀನಾ ಭಾ.ಆ.ಸೇ ಆದ ನಾನು ಈ ಕೆಳಗಿನ ಕೋಷ್ಟಕದ ಅಂಕಣ (6)ರಲ್ಲಿ ತೋರಿಸಿದ ವಾರ್ಡುಗಳಿಗೆ ಅಂಕಣ (3), (4) ಮತ್ತು (5)ರಲ್ಲಿ ತೋರಿಸಿರುವ ಅಧಿಕಾರಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಚುನಾವಣೆ ಜರುಗಿಸುವ ಕುರಿತು ರಾಜ್ಯ ಚುನಾವಣಾ ಆಯೋಗ ನಿಗದಿಪಡಿಸಿರುವ ಕಾರ್ಯಕ್ರಮದಂತೆ ಚುನಾವಣೆ ನಡೆಸಲು ಕ್ರಮವಾಗಿ ಚುನಾವಣಾಧಿಕಾರಿ, ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ, ಹಾಗೂ ಸಹಾಯಕ ಚುನಾವಣಾಧಿಕಾರಿಗಳೆಂದು ನೇಮಿಸಿರುತ್ತೇನೆ.

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣಾಧಿಕಾರಿಗಳು ಹಾಗೂ ಸಹಾಯಕ ಚುನಾವಣಾಧಿಕಾರಿಗಳ ಪಟ್ಟಿ**

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| **1** | **2** | **3** | **4** | **5** | **6** |
| 1 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು ಬೆಂಗಳೂರು. ಉತ್ತರ, | ಕಂದಾಯಾಧಿಕಾರಿ (ಯಲಹಂಕ) ವಲಯ | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಚಾಮರಾಜಪೇಟೆ, ಬೆಂಗಳೂರು. | 1-ಕೆಂಪೇಗೌಡ ವಾರ್ಡ್ |
| | | | | ಸಹಾಯಕ ಕಂದಾಯ ಅಧಿಕಾರಿ, ಯಲಹಂಕ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 2-ಚೌಡೇಶ್ವರಿ ವಾರ್ಡ್ |
| | | | | ತಹಶೀಲ್ದಾರ್, ಬೆಂಗಳೂರು (ಉತ್ತರ) ಅಪರ ತಾಲ್ಲೂಕು | 3-ಅಟ್ಟೂರು |
| | | | | ಬೆಂಗಳೂರು (ಉತ್ತರ) (ಅಪರ ತಹಶೀಲ್ದಾರ್) | 4-ಯಲಹಂಕ ಉಪನಗರ |
| 2 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಎಕ್ಸಿಕ್ಯೂಟಿವ್ ಆಫೀಸರ್, ಬೆಂಗಳೂರು ಉತ್ತರ ತಾಲ್ಲೂಕ್. ಪಂಚಾಯಿತಿ, ಯಲಹಂಕ ಬೆಂಗಳೂರು. | ಕಂದಾಯಾಧಿಕಾರಿ (ಬ್ಯಾಟರಾಯನ ಪುರ) ವಲಯ | ಸಹಾಯಕ ಕಂದಾಯ ಅಧಿಕಾರಿ, ಬ್ಯಾಟರಾಯನಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 5-ಜಕ್ಕೂರು |
| | | | | ಸಿ.ಡಿ.ಪಿ.ಓ ಸೇವಾ ಆಶ್ರಮ, ಚೋಳನಾಯಕನಹಳ್ಳಿ | 6-ಥಣಿಸಂದ್ರ |
| | | | | ಸಹಾಯಕ ನಿರ್ದೇಶಕರು (ಮೀನುಗಾರಿಕೆ), ಯಲಹಂಕ | 7-ಬ್ಯಾಟರಾಯನ ಪುರ |
| | | | | ಸಹಾಯಕ ಕಂದಾಯ ಅಧಿಕಾರಿ, ಬ್ಯಾಟರಾಯನಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 8-ಕೊಡಿಗೇಹಳ್ಳಿ |
| 3 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಉಪಕಾರ್ಯದರ್ಶಿ ಕರ್ನಾಟಕ ರಾಜ್ಯ ಮಹಿಳಾ ಹಕ್ಕು ಆಯೋಗ, ಬೆಂಗಳೂರು | ಸಹಾಯಕ ಕಂದಾಯ ಅಧಿಕಾರಿ, ವಿದ್ಯಾರಣ್ಯಪುರ | ವಿಶೇಷ ತಹಶೀಲ್ದಾರ್, (ಬೆಂಗಳೂರು ಉತ್ತರ) | 9-ವಿದ್ಯಾರಣ್ಯಪುರ |
| | | | | ತಹಶೀಲ್ದಾರ, ಕೆ.ಐ.ಎ.ಡಿ.ಬಿ, (ಬಿ.ಎಂ.ಐ.ಸಿ.ಪಿ), ಬೆಂಗಳೂರು | 10-ದೊಡ್ಡ ಬೊಮ್ಮಸಂದ್ರ |
| | | | | ವಿಶೇಷ ತಹಶೀಲ್ದಾರ್ (ಬೆಂಗಳೂರು ಪೂರ್ವ) | 11-ಕುವೆಂಪು ನಗರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 4 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು, ಮನೆ ಬಾಡಿಗೆ ನಿಯಂತ್ರಕರು ಬೆಂಗಳೂರು ಉತ್ತರ, ಬೆಂಗಳೂರು. | ಕಂದಾಯಾಧಿಕಾರಿ (ದಾಸರಹಳ್ಳಿ) | ಸಹಾಯಕ ಕಂದಾಯಧಿಕಾರಿ, ಶೆಟ್ಟಿಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 12–ಶೆಟ್ಟಿಹಳ್ಳಿ |
| | | | | ಸಹಾಯಕ ಅಧ್ಯಾಪಕರು, ಪಾಲಿಕೆ ಪ್ರೌಢಶಾಲೆ, ಕೆ.ಜಿ.ಹಳ್ಳಿ, ಬೆಂಗಳೂರು | 13–ಮಲ್ಲಸಂದ್ರ |
| | | | | ಸಹಾಯಕ ಕಂದಾಯ ಅಧಿಕಾರಿ, ದಾಸರಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 14–ಬಾಗಲಕುಂಟೆ |
| | | | | ಕಂದಾಯ ಅಧಿಕಾರಿ, (ಬೆಂಗಳೂರು ಪಶ್ಚಿಮ), ಬಿ.ಡಿ.ಎ | 15–ಟಿ.ದಾಸರ ಹಳ್ಳಿ |
| 5 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಕಾರ ಸಂಘಗಳ ಉಪ–ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು | ಸಹಾಯಕ ಕಂದಾಯ ಅಧಿಕಾರಿ, ಕೈಗಾರಿಕಾ ಪ್ರದೇಶ | ತಹಶೀಲ್ದಾರ್, ಬೆಂಗಳೂರು ಜಾಗೃತದಳ, ಕರ್ನಾಟಕ ಸರ್ಕಾರ | 39–ಚೊಕ್ಕಸಂದ್ರ |
| | | | | ಸಹಾಯಕ ನಿಯಂತ್ರಕರು ಹಣಕಾಸು, ಮಹಾದೇವಪುರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 41–ಪೀಣ್ಯ ಕೈಗಾರಿಕಾ ಪ್ರದೇಶ |
| | | | | ಸಹಾಯಕ ಕಂದಾಯ ಅಧಿಕಾರಿ, ಹೆಗ್ಗನಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 70–ರಾಜಗೋಪಾಲ ನಗರ |
| | | | | ಲೆಕ್ಕಪರಿಶೋದನಾಧಿಕಾರಿ, ಮುಖ್ಯ ಲೆಕ್ಕಾಧಿಕಾರಿ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 71–ಹೆಗ್ಗನಹಳ್ಳಿ |
| 6 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ರಾಜರಾಜೇಶ್ವರಿ ನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ರಾಜರಾಜೇಶ್ವರಿನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 160–ರಾಜರಾಜೇಶ್ವರಿ ನಗರ |
| | | | | ತಹಶೀಲ್ದಾರ್, ಬಿ.ಎಂ.ಆರ್.ಸಿ.ಎಲ್, | 129–ಜ್ಞಾನ ಭಾರತಿ ವಾರ್ಡ್ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಲಗ್ಗೆರೆ ಉಪ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 69–ಲಗ್ಗೆರೆ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಆರ್.ಆರ್.ನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 73–ಕೊಟ್ಟಿಗೇಪಾಳ್ಯ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 7 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ರಾಜರಾಜೇಶ್ವರಿ ನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಕಂದಾಯ ಅಧಿಕಾರಿ, ಯಶವಂತಪುರ ವಲಯ. | ತಹಶೀಲ್ದಾರ್, ಕೆ.ಎಸ್.ಎಫ್.ಸಿ., ಜಯನಗರ ಶಾಖೆ, ಬೆಂಗಳೂರು. | 38–ಹೆಚ್.ಎಂ.ಟಿ |
| | | | | ಸಹಾಯಕ ಕಂದಾಯ ಅಧಿಕಾರಿ ಲಕ್ಷ್ಮೀದೇವಿನಗರ, ಆರ್.ಆರ್.ನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 42–ಲಕ್ಷ್ಮೀ ದೇವಿ ನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು ನಗರ ಯೋಜನೆ, ಆರ್.ಆರ್.ನಗರ ವಲಯ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 16–ಜಾಲಹಳ್ಳಿ |
| | | | | ತಹಶೀಲ್ದಾರ್, ಬೆಂಗಳೂರು ದಕ್ಷಿಣ | 17–ಜೆ.ಪಿ.ಉದ್ಯಾನ ವನ |
| | | | | ತಹಶೀಲ್ದಾರ್, ಬೆಂಗಳೂರು ನಿಯಂತ್ರಣಧಳ, ಬೆಂಗಳೂರು | 37–ಯಶವಂತ ಪುರ |
| 8 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಹೆಬ್ಬಾಳ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ತಹಶೀಲ್ದಾರ್ I, ಬಿ.ಎಮ್.ಆರ್.ಸಿ.ಎಲ್. | 18–ರಾಧಕೃಷ್ಣ ದೇವಸ್ಥಾನ ವಾರ್ಡ್ |
| | | | | ತಹಶೀಲ್ದಾರ್ II, ಬಿ.ಎಮ್.ಆರ್.ಸಿ.ಎಲ್. | 19–ಸಂಜಯ ನಗರ |
| | | | | ಸಹಾಯಕ ಕಂದಾಯ ಅಧಿಕಾರಿ, ಹೆಬ್ಬಾಳ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 20–ಗಂಗಾನಗರ |
| | | | | ತಹಶಿಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ. | 21–ಹೆಬ್ಬಾಳ |
| 9 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಬಿ.ಇ.ಓ. ದಕ್ಷಿಣ–1, ಪದ್ಮ ಆಸ್ಪತ್ರೆ ಎದುರು, ಬಸವನಗುಡಿ, ಬೆಂಗಳೂರು, | ಸಹಾಯಕ ಕಂದಾಯ ಅಧಿಕಾರಿ., ಜೆ.ಸಿ. ನಗರ | ಕಂದಾಯ ಅಧಿಕಾರಿ, ಬೆಂಗಳೂರು ಉತ್ತರ | 22–ವಿಶ್ವನಾಥ ನಾಗೇನಹಳ್ಳಿ |
| | | | | ಲೆಕ್ಕಪರಿಶೋಧನಾಧಿಕಾರಿ, ಕಾ.ಸಾ.ಅ. ಕಛೇರಿ, ಇ.ಎಸ್.ಐ. | 33–ಮನೋರಾಯನ ಪಾಳ್ಯ |
| | | | | ತಹಶೀಲ್ದಾರ್, ಪಿ.ಡಬ್ಲ್ಯೂ.ಡಿ., | 34–ಗಂಗೇನಹಳ್ಳಿ |
| | | | | ಉಪನ್ಯಾಸಕರು, ಬಿ.ಎಂ.ಎಸ್. ಕಾಲೇಜು, ಬೆಂಗಳೂರು | 46–ಜಯಚಾಮ ರಾಜೇಂದ್ರ ನಗರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 10 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಸರ್ವಜ್ಞನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಅಧ್ಯಾಪಕರು, ಪಾಲಿಕೆ ಪ್ರೌಢಶಾಲೆ, ಬೈರವೇಶ್ವರ ನಗರ, ಬೆಂಗಳೂರು | 27–ಬಾಣಸವಾಡಿ |
| | | | | ಲೆಕ್ಕಪರಿಶೋಧನಾಧಿಕಾರಿ, ಅಭಾವ ಪರಿಹಾರ ಕೋಶ, ಕಂದಾಯ ಸಚಿವಾಲಯ, ಬೆಂಗಳೂರು | 28–ಕಮ್ಮನಹಳ್ಳಿ |
| | | | | ಸಹಾಯಕ ನಿಯಂತ್ರಕರು (ಹಣಕಾಸು) ಬೊಮ್ಮನಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 49–ಲಿಂಗರಾಜ ಪುರ |
| | | | | ಸಹಾಯಕ ಕಂದಾಯ ಅಧಿಕಾರಿ, ಸರ್ವಜ್ಞನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 59–ಮಾರುತಿ ಸೇವಾ ನಗರ |
| 11 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು (ಮಾರುಕಟ್ಟೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ (ಹೆಚ್.ಬಿ.ಆರ್. ಬಡಾವಣೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 23–ನಾಗವಾರ |
| | | | | ಸಹಾಯಕ ನಿಯಂತ್ರಕರು (ಹಣಕಾಸು) ದಾಸರಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 24–ಹೆಚ್.ಬಿ.ಆರ್. ಬಡಾವಣೆ |
| | | | | ಲೆಕ್ಕ ಪರಿಶೋಧನ ಅಧಿಕಾರಿ, ಬೊಮ್ಮನಹಳ್ಳಿ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 29–ಕಾಚರಕನ ಹಳ್ಳಿ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಮಾಗಡಿ ರಸ್ತೆ, ಬೆಂಗಳೂರು | 30–ಕಾಡುಗೊಂಡನ ಹಳ್ಳಿ |
| 12 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಮಹದೇವಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಕೆ.ಆರ್.ಪುರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 51–ವಿಜಿನಾಪುರ |
| | | | | ಸಹಾಯಕ ಕಂದಾಯ ಅಧಿಕಾರಿ (ಕೆ.ಆರ್.ಪುರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 52–ಕೆ.ಅರ್.ಪುರಂ |
| | | | | ಬಿ.ಇ.ಓ., ಸರ್ಕಾರಿ ಜೂನಿಯರ್ ಕಾಲೇಜು ಕಾಂಪೌಂಡ್ ಹತ್ತಿರ, ಕೆ.ಆರ್.ಪುರಂ. | 53–ಬಸವನಪುರ |
| | | | | ಎ.ಇ.ಓ., ಸರ್ಕಾರಿ ಜೂನಿಯರ್ ಕಾಲೇಜು ಕಾಂಪೌಂಡ್ ಹತ್ತಿರ, ರಾಮಮೂರ್ತಿನಗರ | 55–ದೇವಸಂದ್ರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 13 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯ ನಿರ್ವಹಣಾಧಿಕಾರಿ, ತಾಲ್ಲೂಕ್ ಪಂಚಾಯಿತಿ ಕೆ.ಆರ್.ಪುರಂ, ಬೆಂಗಳೂರು. | – | ಸ.ತೋ. ಅಧಿಕಾರಿ, ಕೆ.ಆರ್. ಪುರಂ. ಬೆಂಗಳೂರು | 25–ಹೊರಮಾವು |
| | | | | ಸಹಾಯಕ ಕಂದಾಯ ಅಧಿಕಾರಿ, ಕೆ.ಆರ್.ಪುರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 26–ರಾಮಮೂರ್ತಿ ನಗರ |
| | | | | ಪಶುಸಂಗೋಪನೆ ಅಧಿಕಾರಿ ಮಹದೇವಪುರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 56–ಎ ನಾರಾಯಣಪುರ |
| | | | | ಸಹಾಯಕ ಕಂದಾಯ ಅಧಿಕಾರಿ, ಮಾರತ್‌ಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 81–ವಿಜ್ಞಾನ ನಗರ |
| | | | | ಸಮಾಜ ಕಲ್ಯಾಣಾಧಿಕಾರಿ, ಕೆ.ಆರ್. ಪುರಂ., ಬೆಂಗಳೂರು | 87–ಹೆಚ್.ಎ.ಎಲ್ ವಿಮಾನ ನಿಲ್ದಾಣ |
| 14 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಉಪ ನಿರ್ದೇಶಕರು, ಕರ್ನಾಟಕ ಮುನ್ಸಿಪಾಲ್ ರೀಪಾರಂ ಸೆಲ್, ಡೈರೆಕ್ಟರ್ ಅಡ್ಮಿನಿಷ್ಟ್ರೇಷನ್, | ಸಹಾಯಕ ಕಂದಾಯ ಅಧಿಕಾರಿ, ಕಾಡುಗೊಂಡನ ಹಳ್ಳಿ | ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಜಿಲ್ಲೆ | 31–ಕುಶಾಲ್ ನಗರ |
| | | | | ಲೆಕ್ಕ ಪರಿಶೋಧನ ಅಧಿಕಾರಿ, ಜಿ.ಎನ್.ಎನ್.ಯು.ಆರ್.ಎಂ. (ಬೃ.ಬೆ.ಮ.ಪಾ.,) | 32–ಕಾವಲ್ ಬೈರಸಂದ್ರ |
| | | | | ತಹಶೀಲ್ದಾರ್, ಕಿದ್ವಾಯಿ ಇನ್ಸ್‌ಸ್ಟಿಟ್ಯೂಟ್ | 48–ಮುನೇಶ್ವರ ನಗರ |
| | | | | ಲೆಕ್ಕಪರಿಶೋಧನ ಅಧಿಕಾರಿ, ಜಿ.ಎನ್.ಎನ್.ಯು.ಆರ್.ಎಂ. (ಬೃ.ಬೆ.ಮ.ಪಾ.,) | 60–ಸಗಾಯಪುರಂ |
| 15 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಸಿ.ವಿ.ರಾಮನ್ ನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಲೆಕ್ಕಪರಿಶೋಧನಾಧಿಕಾರಿ, ಪಾವತಿ ಪೂರ್ವ ಲೆಕ್ಕಪರಿಶೋಧನ ವಿಭಾಗ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 47–ದೇವರಜೀವನ ಹಳ್ಳಿ |
| | | | | ತಹಶೀಲ್ದಾರ್, ಕೆ.ಎಸ್.ಎಫ್.ಸಿ., ಬೆಂಗಳೂರು ಗ್ರಾಮಾಂತರ | 61–ಎಸ್.ಕೆ. ಗಾರ್ಡನ್ |
| | | | | ಸಹಾಯಕ ಕಂದಾಯ ಅಧಿಕಾರಿ, ಪುಲಿಕೇಶಿನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 78–ಪುಲಿಕೇಶಿನಗರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 16 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಮಲ್ಲೇಶ್ವರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಮತ್ತಿಕೆರೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 35–ಅರಮನೆ ನಗರ |
| | | | | ಪ್ರಾಂಶುಪಾಲರು, ಬಿ.ಬಿ.ಎಂ.ಪಿ. ಪಾಲಿಕೆಯ ಬಾಲಕೀಯರ ಜೂನಿಯರ್ ಕಾಲೇಜು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 36–ಮತ್ತಿಕೆರೆ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಮತ್ತಿಕೆರೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 45–ಮಲ್ಲೇಶ್ವರಂ |
| 17 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಮಲ್ಲೇಶ್ವರಂ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು, ಮಲ್ಲೇಶ್ವರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 64–ರಾಜ್‌ಮಹಲ್ ಗುಟ್ಟಳ್ಳಿ |
| | | | | ಸಹಾಯಕ ಕಂದಾಯ ಅಧಿಕಾರಿ, ಮಲ್ಲೇಶ್ವರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 65–ಕಾಡುಮಲ್ಲೇಶ್ವರಂ |
| | | | | ಆರೋಗ್ಯವೈಧ್ಯಾಧಿಕಾರಿ, ಮಲ್ಲೇಶ್ವರಂ ವಿಭಾಗ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 66–ಸುಬ್ರಮಣ್ಯ ನಗರ |
| | | | | ಪ್ರಾಂಶುಪಾಲರು, ನಗರ ಪಾಲಿಕೆ ಜೂನಿಯರ್ ಕಾಲೇಜ್ ಶ್ರೀರಾಮ್ ಪುರ, ಬೆಂಗಳೂರು. | 76–ಗಾಯಿತ್ರಿನಗರ |
| 18 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, (ಕೆಂಗೇರಿ) ಯಶವಂತಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಕೆಂಗೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 130–ಉಲ್ಲಾಳು |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಪಾದರಾಯನಪುರ, ಬೆಂಗಳೂರು | 159–ಕೆಂಗೇರಿ |
| | | | | ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ಕಾಯ್ದೆ, ನಿಯಮ, ತಿದ್ದುಪಡಿ ಸಲಹಾ ಶಾಖೆ), ಕೇಂದ್ರ ಕಛೇರಿ, ಬೆಂಗಳೂರು | 198–ಹೆಮ್ಮಿಗೆಪುರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 19 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಉಪ ಮುಖ್ಯ ಆಡಳಿತಾಧಿಕಾರಿ. ಖಾದಿ ಮತ್ತು ಗ್ರಾಮೀಣ ಉದ್ಯೋಗ ಆಯೋಗ. ಬೆಂಗಳೂರು. | ಸಹಾಯಕ ಕಂದಾಯ ಅಧಿಕಾರಿ, ಹೇರೋಹಳ್ಳಿ | ಉಪಾದ್ಯಾಯರು, ಪಾಲಿಕೆ ಪ್ರೌಢಶಾಲೆ, ಪಾದರಾಯನಪುರ, ಬೆಂಗಳೂರು | 40–ದೊಡ್ಡ ಬಿದರಕಲ್ಲು |
| | | | | ತಹಶೀಲ್ದಾರ್, ಭೂಸ್ವಾಧಿನಾಧಿಕಾರಿ, ಬಿ.ಎಂ.ಆರ್.ಸಿ.ಎಲ್ | 72–ಹೆರೋಹಳ್ಳಿ |
| 20 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಮಹಾಲಕ್ಷ್ಮೀ ಲೇಔಟ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂಧಾಯ ಅಧಿಕಾರಿ, ಮಹಾಲಕ್ಷ್ಮೀ ಲೇಔಟ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 43–ನಂದಿನಿ ಬಡಾವಣೆ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಮಹಾಲಕ್ಷ್ಮೀ ಲೇಔಟ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 44–ಮಾರಪ್ಪನ ಪಾಳ್ಯ |
| | | | | ಎಡಿಟಿಪಿ, (ಪಶ್ಚಿಮ–1) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 68–ಮಹಾಲಕ್ಷ್ಮೀ ಪುರಂ |
| | | | | ಎಡಿಟಿಪಿ (ಪಶ್ಚಿಮ–2), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 74–ಶಕ್ತಿಗಣಪತಿ ನಗರ |
| 21 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಮಹಾಲಕ್ಷ್ಮೀ ಲೇಔಟ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಮಹಾಲಕ್ಷ್ಮೀ ಪುರಂ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 67–ನಾಗಪುರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ನಾಗಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 75–ಶಂಕರ್ ಮಠ |
| | | | | ಎ.ಡಿ.ಟಿ.ಪಿ, (ಪಶ್ಚಿಮ–3) | 102–ವೃಷಭಾವತಿ ನಗರ |
| 22 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಎ.ಇ.ಇ, ಬಿ.ಬಿ.ಎಂಪಿ., ಜೀವನ್‌ಭೀಮ ನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಕ್ಲೈವ್ ಲ್ಯಾಂಡ್ ಟೌನ್, ಬೆಂಗಳೂರು | 80–ಹೊಯ್ಸಳ ನಗರ |
| | | | | ಸಹಾಯಕ ಕಂದಾಯ ಅಧಿಕಾರಿ, ಜೀವನ ಭೀಮನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 88–ಜೀವನ್ ಭೀಮಾನಗರ |
| | | | | ಸ.ಸಂ.ಸಹಾಯಕ ನಿಬಂಧಕರು, 2ನೇ ವೃತ್ತ, ಬೆಂಗಳೂರು | 113–ಕೋನೇನ ಅಗ್ರಹಾರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 23 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ವಿಶೇಷ ಭೂ ಸಾಧ್ವೀನಾಧಿಕಾರಿ ಐ.ಓ.ಸಿ, ಬಾಣಸವಾಡಿ, ಬೆಂಗಳೂರು., | ಸಹಾಯಕ ಕಂದಾಯ ಅಧಿಕಾರಿ, ಬಾಣಸವಾಡಿ | ತಹಶೀಲ್ದಾರ್ ಬಿ.ಎಂ.ಆರ್.ಸಿ.ಎಲ್ | 50–ಬೆನ್ನಿಗಾನ ಹಳ್ಳಿ |
| | | | | ಲೆಕ್ಕಾಧಿಕಾರಿ, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಿ ನಿ., ಬೆಂಗಳೂರು | 57–ಸಿ.ವಿ.ರಾಮನ್ ನಗರ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಕ್ಲೈವ್ ಲ್ಯಾಂಡ್ ಟೌನ್, ಬೆಂಗಳೂರು | 58–ಹೊಸ ತಿಪ್ಪಸಂದ್ರ |
| | | | | ವಸೂಲಾಧಿಕಾರಿ, ಸಹಕಾರಿ ಸಂಘ, ನಿಯಮ 441, ಅಮಾನತ್ ಸಹಾಕಾರಿ ಬ್ಯಾಂಕ್ ಲಿ., ಬೆಂಗಳೂರು | 79–ಸರ್ವಜ್ಞ ನಗರ |
| 24 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕ್, ಕೆ.ಆರ್.ಪುರಂ, ಬೆಂಗಳೂರು | ಸಹಾಯಕ ಕಂದಾಯಾಧಿಕಾರಿ (ಮಾರತ್‌ಹಳ್ಳಿ) | ಸಹಾಯಕ ಕಂದಾಯ ಅಧಿಕಾರಿ, ಹೂಡಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 54–ಹೂಡಿ |
| | | | | ಅರಣ್ಯಾಧಿಕಾರಿ, ಕೆ.ಆರ್.ಪುರಂ | 82–ಗರುಡಾಚಾರ್ ಪಾಳ್ಯ |
| | | | | ಕೃಷಿ ಸಹಾಯಕ ನಿರ್ದೇಶಕರು, ಕೆ.ಆರ್.ಪುರಂ | 85–ದೊಡ್ಡನೆಕ್ಕುಂದಿ |
| | | | | ತಹಶೀಲ್ದಾರ್, ಸಹಾಯಕ ಆಯುಕ್ತರು (ಆಸ್ತಿಗಳು) ಬಿಬಿಎಂಪಿ | 86–ಮಾರತ್ ಹಳ್ಳಿ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಮಾರತ್‌ಹಳ್ಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 150–ಬೆಲಂದೂರು |
| 25 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಮಹದೇವಪುರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಪಶುಸಂಗೋಪನಾಧಿಕಾರಿ, ಯಲಹಂಕ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 83–ಕಾಡುಗೋಡಿ |
| | | | | ಪಶುಸಂಗೋಪನಾಧಿಕಾರಿ, ದಾಸರಹಳ್ಳಿ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 84–ಹಗದೂರು |
| | | | | ಸಹಾಯಕ ಕಂದಾಯ ಅಧಿಕಾರಿ, ವೈಟ್‌ಫೀಲ್ಡ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 149–ವರ್ತೂರು |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 26 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಕಾರಿ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ | ಸಹಾಯಕ ಕಂದಾಯ ಅಧಿಕಾರಿ, ಶಿವಾಜಿನಗರ ವಲಯ. | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು ಮಾಗಡಿ ರಸ್ತೆ, ಬೆಂಗಳೂರು | 90–ಅಲಸೂರು |
| | | | | ಲೆಕ್ಕಪರಿಶೋಧನಾಧಿಕಾರಿ, ಆಂತರಿಕ ಲೆಕ್ಕಪರಿಶೋಧನಾ ಘಟಕ, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | 91–ಭಾರತಿನಗರ |
| | | | | ತಹಶೀಲ್ದಾರ್ ಬೆಂಗಳೂರು, ಜಾಗೃತದಳ, ಬೆಂಗಳೂರು | 92–ಶಿವಾಜಿನಗರ |
| 27 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಶಿವಾಜಿನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಆರೋಗ್ಯ, ವೈದ್ಯಾಧಿಕಾರಿ, ಭಾರತಿನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. | 62–ರಾಮಸ್ವಾಮಿ ಪಾಳ್ಯ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು,ಡಿಸ್ಪೇನ್ಸರಿ ರಸ್ತೆ, ಬೆಂಗಳೂರು | 63–ಜಯಮಹಲ್ |
| | | | | ಸಹಾಯಕ ಕಂದಾಯ ಅಧಿಕಾರಿ, ವಸಂತನಗರ', ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 93–ವಸಂತನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ವಸಂತನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 110–ಸಂಪಂಗಿರಾಮ ನಗರ |
| 28 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಗಾಂಧಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಗಾಂಧಿನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 77–ದತ್ತಾತ್ರೇಯ ದೇವಸ್ಥಾನ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು ಯೋಜನೆ (ಪಶ್ಚಿಮ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 94–ಗಾಂಧಿನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು (ಗಾಂಧಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 95–ಸುಭಾಷ್ ನಗರ |
| | | | | ಆರೋಗ್ಯವೈದ್ಯಾಧಿಕಾರಿ (ಗಾಂಧಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 96–ಓಕಳಿಪುರಂ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 29 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯಧಿಕಾರಿ (ಗಾಂಧಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಚಿಕ್ಕಪೇಟೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 109–ಚಿಕ್ಕಪೇಟೆ |
| | | | | ಸಹಾಯಕ ಕಾರ್ಯಪಾಲಕ ಅಬಿಯಂತರರು, (ಚಿಕ್ಕಪೇಟೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 120–ಕಾಟನ್ ಪೇಟೆ |
| | | | | ಆರೋಗ್ಯ ವೈದ್ಯಾಧಿಕಾರಿ (ಚಿಕ್ಕಪೇಟೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 121–ಬಿನ್ನಿಪೇಟೆ |
| 30 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ, ಶಾಂತಿನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಲೆಕ್ಕಪರಿಶೋಧನಾಧಿಕಾರಿ, ಕಾರ್ಯಪಾಲಕ ಅಭಿಯಂತರರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಬೆಂಗಳೂರು ನಗರ | 111–ಶಾಂತಲಾ ನಗರ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಆಸ್ಟಿನ್ ಟೌನ್, ಬೆಂಗಳೂರು | 116–ನೀಲಸಂದ್ರ |
| | | | | ಸಹಾಯಕ ಕಂದಾಯ ಅಧಿಕಾರಿ, ಶಾಂತಿನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 117–ಶಾಂತಿನಗರ |
| 31 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯದರ್ಶಿ, ಕರ್ನಾಟಕ ರಾಜ್ಯ ಟೆಂಪರೆನ್ಸ್ ಬೋರ್ಡ್ ಬೆಂಗಳೂರು | ಸಹಾಯಕ ಕಂದಾಯ ಅಧಿಕಾರಿ, (ದೊಮ್ಮಲೂರು) ವಲಯ. | ಲೆಕ್ಕಪರಿಶೋಧನಾಧಿಕಾರಿ, ಮುಖ್ಯ ಕಾರ್ಯಚರಣೆ ಅಧಿಕಾರಿಗಳ ಕಛೇರಿ, ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆ, ಬೆಂಗಳೂರು | 89–ಜೋಗು ಪಾಳ್ಯ |
| | | | | ತಹಶೀಲ್ದಾರ್ ಪ್ರಾಧೇಶಿಕ ಆಯುಕ್ತರ ಕಛೇರಿ, ಬೆಂಗಳೂರು. | 112–ದೊಮ್ಮಲೂರು |
| | | | | ಲೆಕ್ಕಪರಿಶೋಧನಾಧಿಕಾರಿ, ಕಾರ್ಯಪಾಲಕ ಅಭಿಯಂತರರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು | 114–ಅಗರಮ್ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಕಸ್ತೂರ ಬಾ ನಗರ, ಬೆಂಗಳೂರು. | 115–ವನ್ನಾರ್ ಪೇಟೆ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| **1** | **2** | **3** | **4** | **5** | **6** |
| 32 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ರಾಜಾಜಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ರಾಜಾಜಿನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 99–ರಾಜಾಜಿನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು (ರಾಜಾಜಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 100–ಬಸವೇಶ್ವರ ನಗರ |
| | | | | ಸಹಾಯಕ ಶಿಕ್ಷಣಾಧಿಕಾರಿ (ಪಶ್ಚಿಮ) | 101–ಕಾಮಾಕ್ಷಿ ಪಾಳ್ಯ |
| | | | | ದೈಹಿಕ ಶಿಕ್ಷಣಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 107–ಶಿವನಗರ |
| 33 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯಾಧಿಕಾರಿ (ರಾಜಾಜಿನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು (ಶ್ರೀರಾಮಮಂದಿರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 97–ದಯಾನಂದ ನಗರ |
| | | | | ಆರೋಗ್ಯ ವೈದ್ಯಾದಿಕಾರಿ (ಶ್ರೀರಾಮಮಂದಿರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 98–ಪ್ರಕಾಶ ನಗರ |
| | | | | ಸಹಾಯಕ ಕಂದಾಯ ಅಧಿಕಾರಿ (ಶ್ರೀರಾಮಮಂದಿರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 108–ಶ್ರೀರಾಮ ಮಂದಿರವಾರ್ಡ್ |
| 34 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಗೋವಿಂಧರಾಜನ ಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಲೆಕ್ಕಪರಿಶೋಧನಾಧಿಕಾರಿ, ಆಂತರಿಕ ಆರ್ಥಿಕ ಸಲಹೆಗಾರರ ಶಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್. ಇಲಾಖೆ, ಬೆಂಗಳೂರು | 103–ಕಾವೇರಿಪುರ |
| | | | | ಸಹಾಯಕ ಕಂದಾಯಾಧಿಕಾರಿ, ಗೋವಿಂದರಾಜನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 104–ಗೋವಿಂದರಾಜ ನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಗೋವಿಂದರಾಜನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 105–ಅಗ್ರಹಾರ ದಾಸರಹಳ್ಳಿ |
| | | | | ಲೆಕ್ಕಪರಿಶೋಧನಾಧಿಕಾರಿ, ನಿಯಂತ್ರಕರ ಕಛೇರಿ, ರಾಜ್ಯ ಲೆಕ್ಕಪತ್ರ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು | 106–ಡಾ॥ ರಾಜ್ ಕುಮಾರ್ ವಾರ್ಡ್ |
| | | | | ಲೆಕ್ಕಪರಿಶೋಧನಾಧಿಕಾರಿ, ಸರ್ಕಾರಿ ಲೆಕ್ಕ ಪರಿಶೋಧಕರ ಕಛೇರಿ, ಕೃಷಿ ವಿಶ್ವ ವಿದ್ಯಾಲಯ, ಜಿ.ಕೆ.ವಿ.ಕೆ., ಬೆಂಗಳೂರು. | 125–ಮಾರೇನಹಳ್ಳಿ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 35 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ (ವಿಜಯನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಆರೋಗ್ಯ ವೈದ್ಯಾಧಿಕಾರಿ (ಗೋವಿಂದರಾಜನಗರ) | 126–ಮಾರುತಿ ಮಂದಿರ ವಾರ್ಡ್ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, (ಚಂದ್ರ ಬಡಾವಣೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 127–ಮೂಡಲ ಪಾಳ್ಯ |
| | | | | ಸಹಾಯಕ ಕಂದಾಯಾಧಿಕಾರಿ, ಚಂದ್ರಲೇಔಟ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 128–ನಾಗರಭಾವಿ |
| | | | | ಲೆಕ್ಕ ಪರಿಶೋಧಾನಾಧಿಕಾರಿ, ವ್ಯವಸ್ಥಾಪಕ ನಿರ್ದೇಶಕರ ಕಛೇರಿ, ಕರ್ನಾಟಕ ಏಡ್ಸ್ ಪ್ರಿವೆನ್ಷನ್ ಸೊಸೈಟಿ, ಕ್ರಿಸೆಂಟ್ ರಸ್ತೆ, ಬೆಂಗಳೂರು | 131–ನಾಯಂಡಹಳ್ಳಿ |
| 36 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು ಯೋಜನೆ. (ಎಂ.ಇ.ಡಿ ಪಶ್ಚಿಮ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು (ಕೆಂಪೇಗೌಡನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 118–ಸುದಾಮ ನಗರ |
| | | | | ಸಹಾಯಕ ಕಂದಾಯ ಅಧಿಕಾರಿ., (ಕೆಂಪೇಗೌಡನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 119–ಧರ್ಮ ರಾಯಸ್ವಾಮಿ ದೇವಸ್ಥಾನ ವಾರ್ಡ್ |
| | | | | ಆರೋಗ್ಯ ವೈದ್ಯಾಧಿಕಾರಿ (ಚಾಮರಾಜಪೇಟೆ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 142–ಸುಂಕೇನ ಹಳ್ಳಿ |
| | | | | ಪ್ರಾಂಶುಪಾಲರು, ಪಾಲಿಕೆ (ಜೂನಿಯರ್ ಕಾಲೇಜ್) ಮಾಗಡಿ ರಸ್ತೆ. | 143–ವಿಶ್ವೇಶ್ವರ ಪುರಂ |
| 37 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಚಿಕ್ಕಪೇಟೆ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು, ಹೊಂಬೇಗೌಡನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 144–ಸಿದ್ದಾಪುರ |
| | | | | ಆರೋಗ್ಯ ವೈದ್ಯಾಧಿಕಾರಿ, (ಹೊಂಬೇಗೌಡನಗರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 145–ಹೊಂಬೇಗೌಡ ನಗರ |
| | | | | ಸಹಾಯಕ ಕಂದಾಯ ಅಧಿಕಾರಿ, (ಹೊಂಬೇಗೌಡನಗರ'), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 153–ಜಯನಗರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 38 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಬಸವನಗುಡಿ). ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಲೆಕ್ಕ ಪರಿಶೋಧನಾಧಿಕಾರಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | 122–ಕೆಂಪಾಪುರ ಅಗ್ರಹಾರ |
| | | | | ಸಹಾಯಕ ಕಂಧಾಯಾಧಿಕಾರಿ, (ವಿಜಯನಗರ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 123–ವಿಜಯನಗರ |
| | | | | ಆರೋಗ್ಯವೈಧ್ಯಾಧಿಕಾರಿ (ಬಿನ್ನಿಪೇಟೆ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 124–ಹೊಸಹಳ್ಳಿ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ವಿಜಯನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 134–ಬಾಪೂಜಿ ನಗರ |
| 39 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ವಿಜಯನಗರ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂಧಾಯಾಧಿಕಾರಿ, (ಗಾಳಿ ಅಂಜನೇಯ ಸ್ವಾಮಿ ದೇವಸ್ಥಾನ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 132–ಅತ್ತಿಗುಪ್ಪೆ |
| | | | | ಲೆಕ್ಕಪರಿಶೋಧನಾಧಿಕಾರಿ, ಏಡ್ಸ್ ಪ್ರಿವೆನ್ಷನ್ ಸೊಸೈಟಿ, ಬೆಂಗಳೂರು. | 133–ಹಂಪಿನಗರ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಚಾಮರಾಜಪೇಟೆ, ಬೆಂಗಳೂರು. | 157–ಗಾಳಿ ಅಂಜನೇಯ ದೇವಸ್ಥಾನ ವಾರ್ಡ್ |
| | | | | ಲೆಕ್ಕಪರಿಶೋಧಾನಾಧಿಕಾರಿ, ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿ, ಬೆಂಗಳೂರು. | 158–ದೀಪಾಂಜಲಿ ನಗರ |
| 40 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು ಎಸ್.ಡಬ್ಲ್ಯೂ.ಡಿ. (ಪಶ್ಚಿಮ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಂದಾಯ ಅಧಿಕಾರಿ, ಜಗಜೀವನ್ ರಾಮ್ ನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 135–ಪಾದರಾಯನ ಪುರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು ಯೋಜನೆ (ಪೂರ್ವ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 136–ಜಗಜೀವನ್ ರಾಮ್‌ನಗರ |
| | | | | ಆರೋಗ್ಯ ವೈದ್ಯಾಧಿಕಾರಿ, (ಜಗಜೀವನ್ ರಾಮನಗರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 137–ರಾಯಪುರಂ |
| | | | | ಪ್ರಾಂಶುಪಾಲರು, ಪಾಲಿಕೆ ಪದವಿ ಪೂರ್ವ ಜ್ಯೂನಿಯರ್ ಕಾಲೇಜು ಕಸ್ತೂರ ಬಾ ನಗರ. | 138–ಛಲವಾದಿ ಪಾಳ್ಯ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 41 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಚಾಮರಾಜ ಪೇಟೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಲೆಕ್ಕಪರಿಶೋಧನಾಕಾರಿ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | 139–ಕೆ.ಆರ್.ಮಾರು ಕಟ್ಟೆ |
| | | | | ಸಹಾಯಕ ಕಂದಾಯ ಅಧಿಕಾರಿ, ಚಾಮರಾಜಪೇಟೆ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 140–ಚಾಮರಾಜ ಪೇಟೆ |
| | | | | ಎ.ಡಿ.ಟಿ.ಪಿ. (ಪಶ್ಚಿಮ–4), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 141–ಅಜಾದ್ ನಗರ |
| 42 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಂದಾಯ ಅಧಿಕಾರಿ (ಜಯನಗರ) ಬೃ.ಬೆ.ಮ.ಪಾ. | – | ವಸೂಲಾತಿ ಅಧಿಕಾರಿ, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಿ ನಿ., ಬೆಂಗಳೂರು | 146–ಲಕ್ಕಸಂದ್ರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ಎಡಿಟಿಪಿ (ದಕ್ಷಿಣ–1) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 152–ಸುದ್ದುಗುಂಟೆ ಪಾಳ್ಯ |
| | | | | ಸಹಾಯಕ ಕಂದಾಯಾಧಿಕಾರಿ, ಬಿ.ಟಿ.ಎಂ. ಬಡಾವಣೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 172–ಮಡಿವಾಳ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು (ಬಿ.ಟಿ.ಎಂ ಲೇಔಟ್), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 176–ಬಿ.ಟ.ಎಂ. ಬಡಾವಣೆ |
| 43 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಯೋಜನೆಗಳು–ದಕ್ಷಿಣ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವೃತ್ತ, ಬೆಂಗಳೂರು | 147–ಆಡುಗೋಡಿ |
| | | | | ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ಗೃಹ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು | 148–ಈಜೀಪುರ |
| | | | | ಸಹಾಯಕ ಕಂದಾಯಾಧಿಕಾರಿ (ಕೋರಮಂಗಲ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 151–ಕೋರಮಂಗಲ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು ಕೋರಮಂಗಲ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 173–ಜಕ್ಕಸಂದ್ರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 44 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ವಿಶೇಷ ಭೂ ಸಾಧ್ವೀನಾಧಿಕಾರಿ, ಬಿ ಡಿ ಎ. ಕೆ ಪಿ. ಪೂರ್ವ,ಟಿ ಚೌಡಯ್ಯ ರಸ್ತೆ ಬೆಂಗಳೂರು. | ಕಂದಾಯ ಅಧಿಕಾರಿ, ಬಸವನಗುಡಿ | ಸಹಾಯಕ ಕಂದಾಯಾಧಿಕಾರಿ, ಬಸವನಗುಡಿಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 154–ಬಸವನಗುಡಿ |
| | | | | ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು. | 155–ಹನುಮಂತ ನಗರ |
| | | | | ಸ.ಸಂ.ಸಹಾಯಕ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು. | 164–ವಿದ್ಯಾಪೀಠ ವಾರ್ಡ್ |
| 45 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಪದ್ಮನಾಭನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು (ಬಸವನಗುಡಿ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 156–ಶ್ರೀನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು (ಗಿರಿನಗರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 162–ಗಿರಿನಗರ |
| | | | | ಸಹಾಯಕ ಕಂದಾಯಾಧಿಕಾರಿ (ಹನುಮಂತನಗರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 163–ಕತ್ರಿಗುಪ್ಪೆ |
| 46 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು, ಜಯನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು, ಪದ್ಮನಾಭನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 161–ಹೊಸಕೆರೆ ಹಳ್ಳಿ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು ಯೋಜನೆಗಳು (ದಕ್ಷಿಣ–1), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 165–ಗಣೇಶ ಮಂದಿರ ವಾರ್ಡ್ |
| | | | | ಸಹಾಯಕ ಕಂದಾಯಾಧಿಕಾರಿ., ಪದ್ಮನಾಭನಗರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 182–ಪದ್ಮನಾಭ ನಗರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು (ಯೋಜನೆಗಳು ದಕ್ಷಿಣ–2) | 183–ಚಿಕ್ಕ ಕಲ್ಲಸಂದ್ರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 47 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಕಾರ್ಯಪಾಲಕ ಅಭಿಯಂತರರು (ಬಿ.ಎಸ್.ಯು.ಪಿ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸಹಾಯಕ ಕಾರ್ಯಪಾಲಕ ಅಭಿಯಂತರರು, ವಿದ್ಯುತ್ (ದಕ್ಷಿಣ–1) | 166–ಕರಿಸಂದ್ರ |
| | | | | ಸಹಾಯಕ ಕಾರ್ಯಪಾಲಕ ಅಭಿಯಂತರರು, ವಿದ್ಯುತ್ (ದಕ್ಷಿಣ–2) | 167–ಯಡಿಯೂರು |
| | | | | ಸಹಾಯಕ ಕಂದಾಯಧಿಕಾರಿ (ಬನಶಂಕರಿ) | 180–ಬನಶಂಕರಿ ದೇವಸ್ಥಾನ ವಾರ್ಡ್ |
| | | | | ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ಬಳಕೆ) ಸಹಕಾರ ಸಚಿವಾಲಯ, ಬೆಂಗಳೂರು | 181–ಕುಮಾರಸ್ವಾಮಿ ಬಡಾವಣೆ |
| 48 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕೆ.ಐ.ಎ.ಡಿ.ಬಿ., ಗಾಂಧಿನಗರ, ಬೆಂಗಳೂರು | ಸಹಾಯಕ ಕಂದಾಯಾಧಿಕಾರಿ (ಜಯನಗರ) ವಲಯ | ಗೆಜೆಟೆಡ್ ಇನ್ಸ್‌ಟ್ರಕ್ಟರ್ ಜಿಲ್ಲಾ ತರಬೇತಿ ಕೇಂದ್ರ ಬೆಂಗಳೂರು | 168–ಪಟ್ಟಾಭಿರಾಮ ನಗರ |
| | | | | ಸಹಾಯಕ ತೋಟಗಾರಿಕ ಅಧೀಕ್ಷಕರು (ದಕ್ಷಿಣ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 169–ಬೈರಸಂದ್ರ |
| | | | | ಆರೋಗ್ಯ ವೈಧ್ಯಾಧಿಕಾರಿ (ಜಯನಗರ) ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 170–ಜಯನಗರ ಪೂರ್ವ |
| | | | | ಪ್ರಾಂಶುಪಾಲರು, ಪಾಲಿಕೆ ಪದವಿ ಪೂರ್ವ ಕಾಲೇಜು, ಜೋಗುಪಾಳ್ಯ, ಬೆಂಗಳೂರು | 171–ಗುರುಪ್ಪನ ಪಾಳ್ಯ |
| 49 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕಾ ಸೇವಾ ಕೇಂದ್ರ ಇಲಾಖೆ, ಪೂರ್ವ ವಲಯ, ಬೆಂಗಳೂರು | ಸಹಾಯಕ ಕಂದಾಯಾಧಿಕಾರಿ, ಜೆ.ಪಿ.ನಗರ | ತಹಶೀಲ್ದಾರ್ ಖಾಧೀ ಬೋರ್ಡ್ ಬೆಂಗಳೂರು | 177–ಜೆ.ಪಿ.ನಗರ |
| | | | | ಎ.ಡಿ.ಟಿ.ಪಿ (ದಕ್ಷಿಣ–2), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 178–ಸಾರಕ್ಕಿ |
| | | | | ತೋಟಗಾರಿಕೆ ಅಧೀಕ್ಷಕರು (ದಕ್ಷಿಣ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 179–ಶಾಕಾಂಬರಿ ನಗರ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| **1** | **2** | **3** | **4** | **5** | **6** |
| 50 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು ಹೆಚ್.ಆರ್ & ಸಿ, ಬೆಂಗಳೂರು ದಕ್ಷಿಣ | ಕಂದಾಯಾಧಿಕಾರಿ (ಬೊಮ್ಮನಹಳ್ಳಿ) ವಲಯ | ಸಹಾಯಕ ನಿರ್ದೇಶಕರು ಆರ್.ಡಿ.ಪಿ.ಆರ್. ಎಂ.ಎಸ್. ಕಟ್ಟಡ ಬೆಂಗಳೂರು. | 174–ಹೆಚ್.ಎಸ್.ಆರ್. ಬಡಾವಣೆ |
| | | | | ಸಹಾಯಕ ಕಂದಾಯ ಅಧಿಕಾರಿ, ಬೊಮ್ಮನಹಳ್ಳಿ | 175–ಬೊಮ್ಮನಹಳ್ಳಿ |
| | | | | ಲೆಕ್ಕಪರಿಶೋಧನಾಧಿಕಾರಿ, ಸಹಾಯಕ ನಿಯಂತ್ರಕರ ಕಛೇರಿ, ಸ್ಥಳಿಯ ಲೆಕ್ಕಪರಿಶೋಧನಾ ವರ್ತುಲ, ಬೆಂಗಳೂರು. | 189–ಹೊಂಗಸಂದ್ರ |
| | | | | ಸಹಾಯಕ ಕಂದಾಯ ಅಧಿಕಾರಿ (ಹೆಚ್.ಎಸ್.ಆರ್.ಬಡಾವಣೆ) | 190–ಮಂಗಮ್ಮನ ಪಾಳ್ಯ |
| 51 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ನಿರ್ದೇಶಕರು, ರಾಜ್ಯ ಭೂ ಬಳಕೆ ವಿಭಾಗ ಕೃಷಿ ಆಯುಕ್ತರ ಕಛೇರಿ, ಶೇಷಾದ್ರಿ ರಸ್ತೆ, ಬೆಂಗಳೂರು | ಸಹಾಯಕ ಕಂದಾಯಾಧಿಕಾರಿ (ಅರಕೆರೆ) | ಉಪನ್ಯಾಸಕರು, ವಿವೇಕಾನಂದ ಪದವಿ ಪೂರ್ವ ಕಾಲೇಜು, ಮಲ್ಲೇಶ್ವರಂ (ಪೂರ್ವ), ಬೆಂಗಳೂರು, | 186–ಜರಗನಹಳ್ಳಿ |
| | | | | ಲೆಕ್ಕಪರಿಶೋಧನಾಧಿಕಾರಿ, ಮುಖ್ಯ ಅಭಿಯಂತರರ ಕಛೇರಿ, ಸಿಎಂಜಿ, ಬೆಂಗಳೂರು. | 187–ಪುಟ್ಟೇನಹಳ್ಳಿ |
| | | | | ಲೆಕ್ಕಪರಿಶೋಧನಾಧಿಕಾರಿ, ಮುಖ್ಯ ಅಭಿಯಂತರರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು. | 188–ಬಿಲೇಕಹಳ್ಳಿ |
| | | | | ತಹಶೀಲ್ದಾರ್ ಕೆ.ಯು.ಐ.ಡಿ.ಎಫ್.ಎಸ್, ಬೆಂಗಳೂರು | 193–ಅರಕೆರೆ |
| 52 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಎಕ್ಸಿಕ್ಯೂಟಿವ್ ಆಫೀಸರ್. ಬೆಂಗಳೂರು ದಕ್ಷಿಣ ತಾಲ್ಲೂಕ್.ಪಂಚಾಯಿತಿ, ಬೆಂಗಳೂರು. | ಸಹಾಯಕ ಕಂದಾಯ ಅಧಿಕಾರಿ, ಅಂಜನಾಪುರ | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಮಾಗಡಿ ರಸ್ತೆ, ಬೆಂಗಳೂರು | 191–ಸಿಂಗಸಂದ್ರ |
| | | | | ಉಪನ್ಯಾಸಕರು, ಪಾಲಿಕೆ ಪದವಿ ಪೂರ್ವ ಕಾಲೇಜು, ಮಾಗಡಿ ರಸ್ತೆ, ಬೆಂಗಳೂರು | 192–ಬೇಗೂರು |
| | | | | ಡೈರೆಕ್ಟರೇಟ್ ಆಪ್ ಪೆನ್‌ಷನರ್, ಎಂ.ಎಸ್.ಬಿಲ್ಡಿಂಗ್, ಬೆಂಗಳೂರು | 194–ಗೊಟ್ಟಿಗೆರೆ |
| | | | | ಸಹಾಯಕ ಕಂದಾಯ ಅಧಿಕಾರಿ, ಯಲಚೇನಹಳ್ಳಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. | 195–ಕೋಣನ ಕುಂಟೆ |

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಹೆಚ್ಚುವರಿ ಸಹಾಯಕ ಚುನಾವಣಾಧಿಕಾರಿ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| | | | | ಸಹಾಯಕ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ (ಆರ್‌ಡಿಪಿಇಆರ್), ಬೆಂಗಳೂರು | 196–ಅಂಜನಾಪುರ |
| 53 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು, ಬೆಂಗಳೂರು ದಕ್ಷಿಣ | ಕೇಂದ್ರ ಸ್ಥಾನಿಕ ಸಹಾಯಕರು, ಅಪರ ಆಯುಕ್ತರು (ದಕ್ಷಿಣ) ಕಛೇರಿ, ಬೆಂಗಳೂರು | ತಹಶೀಲ್ದಾರ್ ಬೆಂಗಳೂರು ಮುನಿಸಿಪಲ್ ಆಡ್ಮಿನಿಸ್ಟ್ರೇಷನ್ ಬೆಂಗಳೂರು. | 184–ಉತ್ತರಹಳ್ಳಿ |
| | | | | ಸಹಾಯಕ ಅಧ್ಯಾಪಕರು, ಪಾಲಿಕೆ ಪ್ರೌಢಶಾಲೆ, ಬನ್ನಪ್ಪ ಪಾರ್ಕ್ ಬೆಂಗಳೂರು | 185–ಯಲಚೇನ ಹಳ್ಳಿ |
| | | | | ಉಪಾಧ್ಯಾಯರು, ಪಾಲಿಕೆ ಪ್ರೌಢ ಶಾಲೆ, ಮಾಗಡಿ ರಸ್ತೆ, ಬೆಂಗಳೂರು | 197–ವಸಂತಪುರ |

**ಭರತ್ ಲಾಲ್ ಮೀನಾ**

ಪಿಡಿ.72

ಆಯುಕ್ತರು,

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

**ಸಂಖ್ಯೆ:ಇ2/ಪ್ರಾಶಾಶಿ/ಶಿಸ್ತುಕ್ರಮ/40/2002–03, ದಿನಾಂಕ:24ನೇ ನವೆಂಬರ್, 2009**

**ಅಂತಿಮವಾಗಿ ಎರಡನೇಯ ನೋಟೀಸು**

**ವಿಷಯ:** ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿರುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಂದಗೋಳ ಇವರ ಪತ್ರ ಸಂಖ್ಯೆ:ಎ1:ಪ್ರಾಶಾಶಿ:ದೂರು/01/ಬಿಟಿಅಂ/2007–08: ದಿನಾಂಕ:28.07.2009.

2) ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:09.09.2009.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖದನ್ವಯ ಶ್ರೀಮತಿ ಬಿ.ಟಿ. ಅಂಗಡಿ, ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಕನ್ನಡ ಹೆಣ್ಣುಮಕ್ಕಳ ಶಾಲೆ ಯರೇಬೂದಿಹಾಳ, ತಾ:ಕುಂದಗೋಳ, ಜಿ:ಧಾರವಾಡ ಆದ ನೀವು ದಿನಾಂಕ:09.04.2004 ರಿಂದ ಇಲ್ಲಿಯವರೆಗೂ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿದ್ದೀರಿ. ಈ ಕುರಿತು ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಮಗೆ ದಿನಾಂಕ:16.04.2004/ದಿನಾಂಕ:02.08.2004/29.04.2005/23.05.2005/ 26.10.2005/ 07.08.2006 ಮತ್ತು ದಿನಾಂಕ:06.01.2009ರ ಪತ್ರದಂತೆ ಶಾಲಾ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡಿ ನೋಟೀಸ್ ಜಾರಿ ಮಾಡಿದ್ದರು, ಹಾಗೂ ಅಂತಿಮವಾಗಿ ದಿನಾಂಕ:03.07.2009ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರು. ಆದರೂ ನೀವು ಈ ವರೆಗೂ ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆ ನಂತರ ಈ ಕಛೇರಿಯಿಂದ ಉಲ್ಲೇಖ 1ರಂತೆ ಅಂತಿಮ ನೋಟೀಸು ಒಂದು ಬಾರಿ ಕಳುಹಿಸಿದರೂ ನೀವು ಸೇವೆಗೆ ಹಾಜರಾಗಿರುವುದಿಲ್ಲ. ಇದರಿಂದಾಗಿ ನೀವು ಸೇವೆಯಲ್ಲಿ ನಿಷ್ಕಾಳಜಿ, ನಿರ್ಲಕ್ಷತನ ಹಾಗೂ ಅವಿಧೇಯತೆ ತೋರಿರುವುದು ಕಂಡುಬರುತ್ತದೆ. ಇದರಿಂದಾಗಿ ನೀವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ನ್ನು ಉಲ್ಲಂಘಿಸಿದ್ದೀರಿ ಎಂದು ಭಾವಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪಖಂಡ (VII) ರ ಅಡಿ ಸೇವೆಗೆ ಅನಧಿಕೃತ ಗೈರು ಉಳಿದ ದಿನದಿಂದಲೇ ಅಂದರೆ ದಿನಾಂಕ:09.04.2004 ರಿಂದ ಜಾರಿಗೆ ಬರುವಂತೆ ನಿಮ್ಮನ್ನು ಸೇವೆಯಿಂದ ವಜಾಗೊಳಿಸಲು ಉಲ್ಲೇಖ 1 ರ ಪತ್ರದಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅನುಮತಿ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ನಿಮಗೆ ಈ ಮೂಲಕ ಅಂತಿಮವಾಗಿ ತಿಳಿಸುವುದೇನೆಂದರೆ ಈ ಅಂತಿಮ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ನೀವು ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿದೆ. ಆದಾಗ್ಯೂ ನೀವು ಸೇವೆಗೆ ಹಾಜರಾಗದಿದ್ದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (2)ರಲ್ಲಿನ ಪ್ರದತ್ತವಾದ

ಅಧಿಕಾರವನ್ನು ಚಲಾಯಿಸಿ ನಿಮ್ಮನ್ನು ನಿಯಮಾನುಸಾರ ಸೇವೆಯಿಂದ ವಜಾ ಮಾಡಲು ಕ್ರಮ ವಹಿಸಲಾಗುವುದು ಎಂದು ಈ ಮೂಲಕ ಸೂಚಿಸಲಾಗಿದೆ.

ಉಪನಿರ್ದೇಶಕರು (ಆಡಳಿತ),
ಪಿ.ಆರ್.1250 ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–25/08–09, ದಿನಾಂಕ:21ನೇ ನವೆಂಬರ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ, ಶಿಕಾರಿಪುರ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಜೆ.ಕೆ. ಶಿವಾನಂದ

**ಭಾದ್ಯತೆದಾರರು:** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:02–10–2008ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಹಾರೋಗೊಪ್ಪ ಶಾಖೆಯ ಮಾರ್ಕಾಂಡೆಯ ಮನ್ನಾ ಜಂಗ್ಲಿ ರಸ್ತೆಯಿಂದ ಶಿವಮೊಗ್ಗ ಶಿಕಾರಿಪುರಕ್ಕೆ ಬರುವ ಪಿಡಬ್ಲ್ಯೂಡಿ ರಸ್ತೆಯಲ್ಲಿ ಇಲಾಖಾ ವಾಹನದಲ್ಲಿ ಕಾರ್ಯ ನಿಮಿತ್ತವಾಗಿ ಹೋಗುತ್ತಿರುವಾಗ ಒಂದು ಮಾರುತಿ ವ್ಯಾನ್ ಬರುತ್ತಿದ್ದು, ಸಮವಸ್ತ್ರಧಾರಿಗಳಾದ ಇಲಾಖೆಯವರನ್ನು ನೋಡಿ ಸುಮಾರು 100 ಅಡಿ ದೂರದಲ್ಲಿ ವಾಹನವನ್ನು ನಿಲ್ಲಿಸಿ ವ್ಯಾನಿನಿಂದ ಜಿಗಿದು 2ಜನ ಅಸಾಮಿಗಳು ಪರಾರಿಯಾದರು. ಅದರಲ್ಲಿ ಒಬ್ಬನ ಪರಿಚಯವಿದ್ದು, ಜೆ.ಕೆ. ಶಿವಾನಂದ ಬಿನ್ ಜೇನಿ ಕೆರಿಯಪ್ಪ, ವಿನಾಯಕ ನಗರದವರಾಗಿದ್ದಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ ಬಿಳಿ ಬಣ್ಣದ ಮಾರುತಿ ವ್ಯಾನ್ ಕೆಎ–04–ಎಂ–229, ಛಾಸ್ಸಿಸ್ ನಂ:ST-91-IN-824245 ಆಗಿದ್ದು, ವಾಹನದಲ್ಲಿ ಹೊಂಬಸಿಯ ಕೈಕೊಯ್ತು ಮಾಡಿದ ಸಾಗುವಾನಿ ಸೈಜುಗಳಿದ್ದು ಈ ಸೈಜುಗಳ ಮೇಲೆ ಇಲಾಖಾ ಛಾಪಾದ ಗುರುತು ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 47/08–09ನ್ನು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:07–10–2008ರಂದು ಆದೇಶವಾಗಿದೆ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ವಿಚಾರಣಾ ವರದಿ ಸಲ್ಲಿಸಿ, ಆರೋಪಿಯ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪತ್ರವನ್ನು ಸಲ್ಲಿಸಲು ಮತ್ತು ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–25/08–09 ದಿನಾಂಕ:20–10–2009 ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರು ಈ ವಾಹನದ ಸಿ.ಸಿ.ಯನ್ನು ದಿನಾಂಕ:18–02–1992ರಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾ ನಗರ (ಪೂರ್ವ), ಬೆಂಗಳೂರು ಕಛೇರಿಗೆ ವರ್ಗಾಯಿಸಿದೆಯೆಂದು ತಿಳಿಸಿದ ಮೇರೆಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾ ನಗರ (ಪೂರ್ವ), ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ: ದಿನಾಂಕ:17–04–2009ರಂದು ಬರೆದು ಬಿ ಪ್ರತಿ ಒದಗಿಸಲು ಕೋರಿದಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾ ನಗರ (ಪೂರ್ವ), ಬೆಂಗಳೂರು ಇವರು ಈ ವಾಹನದ ಸಿ.ಸಿ.ಯನ್ನು ದಿನಾಂಕ:12–11–1998ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಕಛೇರಿಗೆ ವರ್ಗಾಯಿಸಿದೆಯೆಂದು ತಿಳಿಸಿದ ಮೇರೆಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ ದಿನಾಂಕ:02–01–2009ರಂದು ಪತ್ರ ಬರೆದು ಈ ವಾಹನ ಯಾರ ಹೆಸರಿಗೆ ನೊಂದಣಿಯಾಗಿದೆ ಎನ್ನುವ ಬಗ್ಗೆ ಬಿ ವಹಿ ಒದಗಿಸಲು ಕೋರಿದೆ. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡ ನಂತರ

ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ರವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:02–12–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11–12–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ಸೈಜ್‌ಗಳನ್ನು ದಿನಾಂಕ:02–10–2008ರಂದು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ:47/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–04–ಎಂ–229 (ಛಾಸ್ಸಿಸ್ ನಂ:ST-91-IN-824245) ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಸೈಜ್ 13=0.350 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1259 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–24/07–08, ದಿನಾಂಕ:21ನೇ ನವೆಂಬರ್, 2008**

| | |
|---|---|
| **ಉಪಸ್ಥಿತರು:** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು:** | ಪೋಲಿಸ್ ಸಬ್ ಇನ್ಸ್‌ಪೆಕ್ಟರ್,<br>ಶಿಕಾರಿಪುರ ಪೋಲಿಸ್ ಠಾಣೆ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು:** | ಪತ್ತೆಯಾಗಿರುವುದಿಲ್ಲ. |
| **ಭಾದ್ಯತೆದಾರರು:** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿನಾಂಕ:18–03–1999ರಂದು ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಗಳು, ಶಿಕಾರಿಪುರ ಪೋಲಿಸ್ ಠಾಣೆ ಇವರು ಗಸ್ತು ತಿರುಗುತ್ತಿರುವಾಗ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಲಾರಿ ನಂ: ಎಂಇಐ–5060ನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 24, 62, 104(ಎ) ಮತ್ತು ಐಪಿಸಿ 379, 411ರ ಪ್ರಕಾರ ಶಿಕಾರಿಪುರ ಠಾಣೆ

ಗುನ್ನೆ ನಂ: 46/99ನ್ನು ದಾಖಲಿಸಿ ನಂತರ ಜೆಎಂಎಫ್‌ಸಿ, ಶಿಕಾರಿಪುರಕ್ಕೆ ಒಪ್ಪಿಸಿರುತ್ತಾರೆ. ಈ ಪ್ರಕರಣದಲ್ಲಿ ಸಿವಿಲ್ ಜಡ್ಜ್ (ಕಿ,ವಿ.) ಮತ್ತು ಜೆ.ಎಂ.ಎಫ್.ಸಿ., ಶಿಕಾರಿಪುರ ಇವರು ಈ ಲಾರಿಯ ಬಗ್ಗೆ ಕರ್ನಾಟಕ ಅರಣ್ಯ ಕಾಯ್ದೆ 71ರ ಪ್ರಕಾರ ಮುಂದಿನ ಕ್ರಮ ತೆಗೆದುಕೊಳ್ಳಲು ವಾಹನವನ್ನು ಈ ನ್ಯಾಯಾಲಯದ ಸುಪರ್ಧಿಗೆ ಪಡೆಯಲು ದಿನಾಂಕ:22-01-2008ರಂದು ಆದೇಶವಾಗಿದೆ. ಸದರಿ ವಾಹನವು ಚಾಲನಾ ಸ್ಥಿತಿಯಲ್ಲಿ ಇಲ್ಲದ ಕಾರಣ ಶಿಕಾರಿಪುರ ವಲಯದ ವಲಯ ಅರಣ್ಯಾಧಿಕಾರಿಗಳ ಸುಪರ್ಧಿಗೆ ಪಡೆದು ಕಛೇರಿ ಕಾಂಪೌಂಡ್‌ನಲ್ಲಿ ಇಡಲು ದಿನಾಂಕ:05-02-2008ರಂದು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಿ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ-24/07-08 ದಿನಾಂಕ:25-03-2009ರಂದು ನೊಂದಣಿ ಅಂಚೆ ಮೂಲಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಳಗಾಂ ರವರಿಗೆ ಜಾರಿ ಮಾಡಿದೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಳಗಾಂ ರವರು ತಮ್ಮ ಪತ್ರ ಸಂಖ್ಯೆ: ಪ್ರಾಸಾಅ:ಬೆಳ:ಎಂಇಐ-5060/08-09-11/09-10 ದಿನಾಂಕ:31-03-2009ರಲ್ಲಿ ಈ ವಾಹನದ ಸಿ.ಸಿ.ಯನ್ನು ಸಾರಿಗೆ ಕಛೇರಿ, ಬೈಲಹೊಂಗಲಕ್ಕೆ ದಿನಾಂಕ:11-12-92ರಲ್ಲಿ ಕಳುಹಿಸಲಾಗಿದೆಯೆಂದು ವರದಿಸಿರುತ್ತಾರೆ. ಇವರ ವರದಿಯ ಆಧಾರದ ಮೇಲೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ-24/07-08 ದಿನಾಂಕ:18-04-2009ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ರವರಿಗೆ ಪತ್ರ ಬರೆದು, ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಿದಂತೆ ಈ ವಾಹನದ ಸಿ.ಸಿ.ಯನ್ನು ಸಾರಿಗೆ ಕಛೇರಿ, ಚಿಕ್ಕಬಳ್ಳಾಪುರಕ್ಕೆ ದಿನಾಂಕ:05-09-1995ರಂದು ವರ್ಗಾಯಿಸಿರುವುದಾಗಿ ವರದಿಸಿರುತ್ತಾರೆ. ಇವರ ವರದಿಯಂತೆ ಚಿಕ್ಕಬಳ್ಳಾಪುರದ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಗೆ ಈ ಕಛೇರಿ ಪತ್ರ ಸಂಖ್ಯೆ: ಬಿ3:ಅಮೊ:ವಾಹನ-24/07-08 ದಿನಾಂಕ:10-06-2009ರಂದು ಮತ್ತು ದಿನಾಂಕ:30-10-2009 ರಂದು ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಿರುತ್ತದೆ. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಈ ವಾಹನ ಮುಟ್ಟುಗೋಲು ಹಾಕಿಕೊಂಡ ನಂತರ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಬಳ್ಳಾಪುರ ರವರೇ ನೇರ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ದಿನಾಂಕ:10-04-2008ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:17-04-08ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31-10-2009 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಬೀಟೆ ನಾಟಾ ಸಹಿತ ದಿನಾಂಕ:18-03-1999ರಂದು ಸೈಜುಗಳನ್ನು ಸಾಗಿಸಿದ ಬಗ್ಗೆ ಪೋಲಿಸ್ ಇನ್ಸ್‌ಪೆಕ್ಟರ್, ಶಿಕಾರಿಪುರ ಪೋಲಿಸ್ ಠಾಣೆ ಇವರು ಇಲಾಖಾ ಪರ ವಶಪಡಿಸಿಕೊಂಡು, ಗುನ್ನೆ ನಂ: 46/99ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿಯೊಂದಿಗೆ ವಾಹನವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಯಾರೂ ಈ ಪ್ರಕರಣದಲ್ಲಿ ನ್ಯಾಯಾಲಯಕ್ಕೆ ಹಾಜರಾಗಿ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸಿರುವುದಿಲ್ಲ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಶಿಕಾರಿಪುರ ಪೋಲಿಸ್ ಠಾಣೆ ಇವರು ಜಪ್ತು ಮಾಡಿದ ವಾಹನ ಲಾರಿ ನಂ.ಎಂಇಐ-5060ನ್ನು ಮತ್ತು ಈ ವಾಹನದಲ್ಲಿದ್ದ 10 ಬೀಟೆ ನಾಟಾಗಳು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21-11-2009 ರಂದು ನನ್ನ ಸಹಿ ಹಾಗೂ

ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1260

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–21/08–09, ದಿನಾಂಕ:21ನೇ ನವೆಂಬರ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ.(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಯಾರೂ ಪತ್ತೆಯಾಗಿಲ್ಲ

**ಭಾಧ್ಯತೆದಾರರು:** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:25–09–2008ರಂದು ಸಾಗರ ವಲಯದ ತ್ಯಾಗರ್ತಿ ವನಪಾಲಕ ಮತ್ತು ಟೌನ್ ವನಪಾಲಕ ಮತ್ತು ರಾತ್ರಿ ಗಸ್ತು ಸಿಬ್ಬಂದಿಯವರು ರಾತ್ರಿ ಗಸ್ತು ತಿರುಗುತ್ತಿರುವಾಗ ಸಾಗರ ತಾಲ್ಲೂಕು ಕಸಬಾ ಹೋಬಳಿ ಬರೂರು ಗ್ರಾಮದ ಸ.ನಂ: 120ರ ಬೆಳಂದೂರು ಮನ್ನಾ ಜಂಗ್ಲಿಯ ತ್ಯಾಗರ್ತಿಯಿಂದ ಇಂಡುವಳ್ಳಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯ ಎಡಭಾಗದಲ್ಲಿ ಬೆಳಿಗ್ಗೆ ಸುಮಾರು 6ಗಂಟೆ ಸಮಯದಲ್ಲಿ ಎರಡು ನಂದಿ ಮರಗಳನ್ನು ಆಗತಾನೆ ಕಡಿದಿದ್ದು ಕಂಡುಬಂದಿತು. ನಾಟಾ 7=0.630ಎಂ3 ಪ್ರಮಾಣವಿದ್ದು, ಸುತ್ತಲೂ ಪರಿಶೀಲಿಸಲಾಗಿ ಮರ ಕಡಿದ ಜಾಗದಿಂದ 100 ಅಡಿ ದೂರದಲ್ಲಿ ಒಂದು ಕೆಂಪು ಬಣ್ಣದ ಬಜಾಜ್ ಎಂ–80 ಸಿಟಿಡಿ–7185 ಛಾಸ್ಸಿಸ್ ನಂ: 16-C-0586 ಆಗಿತ್ತು. ಸದರಿ ಮರ ಕಡಿಯಲು ಇಲಾಖೆಯ ಅನುಮತಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಮತ್ತು ಈ ನಾಟಾವನ್ನು ಅಕ್ರಮವಾಗಿ ಕಡಿದು ಸಾಗಿಸಲು ಈ ವಾಹನ ಉಪಯೋಗಿಸಿರುವುದೆಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 55/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:30–09–2008ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–21/08–09 ದಿನಾಂಕ:22–10–2008 ಮತ್ತು 24–03–2009ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲವಾದ್ದರಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ನಂತರ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ರವರೇ ನೇರ ಜವಾಬ್ದಾರರಾಗುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:02–12–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11–02–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ನಂದಿ ನಾಟಾವನ್ನು ದಿನಾಂಕ:25–09–2008ರಂದು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ: 55/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80 ಸಿಟಿಡಿ–7185 (ಛಾಸ್ಸಿಸ್ ನಂ:16-C-0586) ನ್ನು ಮತ್ತು ಈ ವಾಹನದಲ್ಲಿದ್ದ ನಂದಿ ನಾಟಾ 7=0.630ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1257

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–22/08–09, ದಿನಾಂಕ:21ನೇ ನವೆಂಬರ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ, ಶಿಕಾರಿಪುರ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ

**ಭಾಧ್ಯತೆದಾರರು:** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:19–09–2008ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ವಲಯದ ರಾತ್ರಿ ಗಸ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ, ಹಿರೇಹೊರಲಹಳ್ಳಿ ಡಾಂಬರ್ ರಸ್ತೆಯಲ್ಲಿ ಇಲಾಖಾ ವಾಹನದಲ್ಲಿ ಬಂದು ಕಾಯುತ್ತಿರುವಾಗ ಬೆಳಗಿನ ಜಾವ 5–00 ಗಂಟೆಗೆ ಒಂದು ವಾಹನ ಅಂಜನಾಪುರ ಡ್ಯಾಂ ಕಡೆಯಿಂದ ಹೆಡ್‌ಲೈಟ್ ಹಾಕಿಕೊಂಡು ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ತಿರುಗಿಸಿ ಬಂದ ದಾರಿಯಲ್ಲಿ ಹೋಗಲು ಪ್ರಯತ್ನಿಸಿದಾಗ ವಾಹನ ಪಲ್ಟಿ ಹೊಡೆದು ಬಿದ್ದಿತು. ಬೆನ್ನಟ್ಟಿ ಬರುವಷ್ಟರಲ್ಲಿ ಈ ವಾಹನದಲ್ಲಿದ್ದ ಅಸಾಮಿಗಳು ಕತ್ತಲಲ್ಲಿ ಓಡಿ ಪರಾರಿಯಾದರು. ನಂತರ ವಾಹನವನ್ನು ಪರಿಶೀಲಿಸಿದಾಗ ಸುಜುಕಿ ಮ್ಯಾಕ್ಸ್ 100 ಬೈಕ್ ಕೆಎ–14–ಜೆ–6474, ಛಾಸ್ಸಿಸ್ ನಂ:1704-F-795582, ಇಂಜಿನ್ ನಂ: 1704-M-841472 ಆಗಿದ್ದು, ಮತ್ತು ಈ ವಾಹನದಲ್ಲಿ ಸಾಗುವಾನಿ ಸೈಜ್ 5=0.042ಎಂ3 ಪ್ರಮಾಣವಿದ್ದು, ಈ ಸೈಜುಗಳ ಮೇಲೆ ಇಲಾಖಾ ಛಾಪಾದ ಗುರುತು ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ರಿಂದ (ಜಿ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಮತ್ತು ಐಪಿಸಿ ಸೆಕ್ಷನ್ 379ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 40/08–09ನ್ನು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು

ಜಪ್ತು ವರದಿಯೊಂದಿಗೆ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:07–10–2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–22/08–09 ದಿನಾಂಕ:22–10–2009 ಮತ್ತು 25–03–2009ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡಾಗ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ರವರೇ ನೇರ ಹೊಣೆಗಾರರಾಗಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:02–12–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11–12–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ನಾಟಾವನ್ನು ದಿನಾಂಕ:19–09–2008ರಂದು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ: 40/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಜಪ್ತು ಮಾಡಿದ ವಾಹನ ಸುಜುಕಿ ಮ್ಯಾಕ್ಸ್–100 ಬೈಕ್ ಕೆಎ–14–ಜೆ–6674 ಛಾಸ್ಸಿಸ್ ನಂ:1704-F-795582, ಇಂಜಿನ್ ನಂ: 1704-M-841472) ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಸೈಜ್ 5=0.042ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1258 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.